# ಮೊದಲನೆಯ ಮುದ್ರಣದ ಮುನ್ನುಡಿ

ನನ್ನ ಪೂಜ್ಯ ಮಿತ್ರರಾದ ಶ್ರೀನಿವಾಸ್ ನವರತ್ನದ ರಾಮರಾಯ ರವರು ತಮ್ಮ ಪರಿಚಯದ ಒಬ್ಬ ವೃದ್ಧ ಗಾಯಕನ ಕಡೆಯ ದಿನಗಳನ್ನು ತಮ್ಮ ಸ್ನೇಹಿತರಿಗೆ ಒಮ್ಮೊಮ್ಮೆ ವರ್ಣಿಸಿ ಹೇಳುವುದುಂಟು. ಅವರು ಹೀಗೆ ನನಗೆ ವರ್ಣಿಸಿದ ವ್ಯಕ್ತಿಯೇ ಈ ಕತೆಯ ನಾಯಕನು. ರಾಮ ರಾಯರವರೇ ಆ ವೃದ್ಧನನ್ನು ಕುರಿತ ಕತೆಯೊಂದನ್ನು ಬರೆಯಬೇಕೆಂದು ಉದ್ದೇಶಿಸಿದ್ದರು. ಆದರೆ ನನಗೂ ಆ ವಸ್ತುವಿನ ಮೇಲೆ ಆಸೆ ಇದೆಯೆಂಬ ಯೋಚನೆಯಿಂದಲೂ' ಇತರ ಕಾರಣದಿಂದಲೂ ಅವರು ತಮ್ಮ ಉದ್ದೇಶ ವನ್ನು ಬಿಟ್ಟು ಆ ಗಾಯಕನನ್ನು ಕತೆಯಲ್ಲಿ ತೋರಿಸುವ ಕೆಲಸವನ್ನು ನನಗೆ ಕೊಟ್ಟರು. ಅವರು ಗುರುತು ಮಾಡಿಕೊಟ್ಟ ಜೀವನದ ಸಂಪೂರ್ಣ ಚಿತ್ರವೊಂದನ್ನು ಕಲ್ಪಿಸುವ ಪ್ರಯತ್ನದಲ್ಲಿ ಈ ಪುಸ್ತಕದ ಕತೆಯು ನಿರ್ಮಾಣವಾಯಿತು.

ರಾಮರಾಯರವರ ರಸಾಭಿಜ್ಞತೆಯನ್ನೂ ಕಥಾನಿರೂಪಣ ಶಕ್ತಿ ಯನ್ನೂ ನಮ್ಮಲ್ಲಿ ಅನೇಕರು ಬಲ್ಲೆವು. ತಾವು ಉದ್ದೇಶಿಸಿದ್ದ ಕತೆಯನ್ನು ಅವರು ಬರೆದಿದ್ದರೆ ಅದು ಇನ್ನೆಂತಹ ಕತೆಯಾಗುತ್ತಿತ್ತೆಂದು ಅಂಥವರು ತಕ್ಕಮಟ್ಟಿಗೆ ಊಹಿಸಬಹುದು. ಇಷ್ಟು ಶಕ್ತಿ ಇರುವವರು ಉತ್ತಮ ವಾದ ಕಥಾವಸ್ತುವನ್ನು ನನಗೆ ಬಿಟ್ಟುಕೊಟ್ಟದ್ದರ ಔದಾರ್ಯವು ಇನ್ನೆಷ್ಟೆಂದು ನಾನು ಹೇಳಬೇಕಾಗಿಲ್ಲ. ಇವರು ಈ ರೀತಿಯಲ್ಲೂ ಇನ್ನು ಇತರ ವಿಧದಲ್ಲೂ ನನಗೆ ತೋರಿಸಿರುವ ಪ್ರೇಮಕ್ಕಾಗಿ ನಾನು ಇವರಿಗೆ ಕೃತಜ್ಞನಾಗಿದೇನೆ.

ಈ ಕತೆಯು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾಗುತ್ತಿದೆ. ಇದಕ್ಕೆ ಆ ಪತ್ರಿಕೆಯಲ್ಲಿ ಅವಕಾಶವನ್ನು ಕಲ್ಪಿಸಿದ್ದಕ್ಕಾಗಿ ನಾನು ಅದರ ಕರ್ತರಿಗೆ ಇಲ್ಲಿ ವಂದನೆಗಳನ್ನು ಸೂಚಿಸಲಪೇಕ್ಷಿಸುತ್ತೇನೆ.

**ಮೈಸೂರು, ಪ್ರಭವ ಸಂ||**
**ಮಾಘ ಬಹುಳ ತ್ರಯೋದಶಿ**

ಶ್ರೀನಿವಾಸ.

## ಶ್ರೀನಿವಾಸ ರಚಿತ

ಕೆಲವು ಸಣ್ಣ ಕತೆಗಳು
ಬಿನ್ನಹ (ಗೀತೆಗಳು)
ಶಾಂತಾ (ಸಣ್ಣ ದೃಶ್ಯ)
ಸಾವಿತ್ರಿ ( ,, )
ಸಣ್ಣ ಕತೆಗಳು
ಸಾಹಿತ್ಯ (ಉಪನ್ಯಾಸ)
ಅರುಣ (ಪದ್ಯಗಳು)
ವಿಮರ್ಶೆ ೧ (ಲೇಖನಗಳು)
ಉಷಾ (ಸಣ್ಣ ದೃಶ್ಯ)
ಸುಬ್ಬಣ್ಣ (ಕತೆ)
ತಾಳೀಕೋಟೆ
(ಐತಿಹಾಸಿಕ ದೃಶ್ಯ)

ವಿಮರ್ಶೆ ೨ (ಲೇಖನಗಳು)
ನಾಲ್ಕು ಸಣ್ಣ ಕತೆಗಳು
ಕನ್ನಡದ ಸೇವೆ (ಭಾಷಣ)
ಮಂಜುಳಾ (ಸಾಮಾಜಿಕ ದೃಶ್ಯ)
ತಾವರೆ (ಪದ್ಯಗಳು)
ಕರ್ಣಾಟಕದ ಜನತೆಯ ಸಂಸ್ಕೃತಿ
ಚೆಲುವು (ಪದ್ಯಗಳು)
ಶಿವ ಛತ್ರಪತಿ (ಐತಿಹಾಸಿಕ ದೃಶ್ಯ)
ವಿಮರ್ಶೆ ೩ (ಲೇಖನಗಳು)
ಯಶೋಧರಾ (ದೃಶ್ಯ)
ಮಲಾರ (ಪದ್ಯಗಳು)
ರವೀಂದ್ರನಾಥ ಠಾಕೂರರು

---

ಈ ಪುಸ್ತಕಗಳು ದೊರೆಯುವ ಸ್ಥಳಗಳು :—

ಸತ್ಯಶೋಧನ ಪುಸ್ತಕ ಭಂಡಾರ, ಬೆಂಗಳೂರು
ಎಂ. ಎಸ್. ರಾವ್ ಕಂಪೆನಿ, ದೊಡ್ಡಪೇಟೆ, ಬೆಂಗಳೂರು
ಕರ್ಣಾಟಕ ಸಂಘ, ಸೆಂಟ್ರಲ್ ಕಾಲೇಜು, ಬೆಂಗಳೂರು
ದಿ ಪ್ರೋಗ್ರೆಸ್ ಬುಕ್ ಸ್ಟಾಲ್, ಮೈಸೂರು
ಕರ್ಣಾಟಕ ಸಾಹಿತ್ಯ ಮಂದಿರ, ಧಾರವಾಡ

ಶ್ರೀ

# ಸುಬ್ಬಣ್ಣ

೧

ಶ್ರೀಮನ್ಮಹಾರಾಜ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರವರು ಮೈಸೂರ ಸಿಂಹಾಸನವನ್ನು ಅಲಂಕರಿಸಿದ್ದ ಕಾಲದಲ್ಲಿ ಮೈಸೂರಿನ ಆಸ್ಥಾನವು ಎಂದಿಗಿಂತಲೂ ವಿಶೇಷವಾಗಿ ಸಮಸ್ತ ವಿದ್ವಾಂಸ ರಸಿಕ ಕಲಾಕೋವಿದರಿಗೆ ಆಶ್ರಯಸ್ಥಾನವಾಗಿತ್ತು. ಮಹಾರಾಜರು ಸ್ವಭಾವವಾಗಿ ಉದಾರಶೀಲರು; ಅದರಮೇಲೆ ಸ್ವಯಂ ಪಂಡಿತರು; ಶಾಸ್ತ್ರಜ್ಞರು, ಕಾವ್ಯ ಕರ್ತೃಗಳು. ಆದುದರಿಂದ ಅವರಿಗೆ ವಿದ್ಯೆಯನ್ನು ಕಂಡರೆ ಪೂಜ್ಯಬುದ್ಧಿ. ಈ ಕಾರಣದಿಂದ ಅವರು ಆಶ್ರಯವನ್ನಾಶಿಸಿ ಬಂದ ಯಾರಿಗಾಗಲಿ ನಾಸ್ತಿ ಎಂದು ಹೇಳುತ್ತಿರಲಿಲ್ಲ. ಹಾಗೆ ಮಹಾರಾಜರ ಔದಾರ್ಯದ ಪೋಷಣೆಯಲ್ಲಿದ್ದವರಲ್ಲಿ ಪುರಾಣದ ನಾರಾಯಣ ಶಾಸ್ತ್ರಿಗಳೆನ್ನುವವರು ಒಬ್ಬರು. ಶಾಸ್ತ್ರಿಗಳ ಹಿರಿಯರು ಚಾಮರಾಜ ನಗರದವರು. ಆದರೆ ಆಗ್ಗೆ ಮೂರು ನಾಲ್ಕು ತಲೆಗಳಿಂದ ಇವರ ಮನೆಯವರು ಮೈಸೂರಿನಲ್ಲಿ ಇರುತ್ತಿದ್ದರು. ನಾರಾಯಣಶಾಸ್ತ್ರಿಗಳು ಸಂಸ್ಕೃತದಲ್ಲಿ ಎಲ್ಲಾ ಭಾಗದಲ್ಲೂ ಪಾಂಡಿತ್ಯವನ್ನು ಸಂಪಾದಿಸಿದ್ದರೂ ಮುಖ್ಯವಾಗಿ ಪುರಾಣ ಶ್ರವಣ ಮಾಡಿಸುವುದರಲ್ಲಿ ಅತಿಶಯವಾದ ಶಕ್ತಿಯನ್ನು ಪಡೆದಿದ್ದರು. ಇವರ ಧ್ವನಿಯು ಗಂಭೀರವಾಗಿಯೂ ಮಧುರವಾಗಿಯೂ ಇತ್ತು; ಮಾತು ಅವಿರಳವಾದರೂ ಸಾವಧಾನ. ಸಭೆಯಲ್ಲಿ ಉಪನ್ಯಾಸ ಮಾಡಲು ಇತರ ಪಂಡಿತರಿಗಿಂತ ಇವರಿಗೆ ಈ ಕಾರಣದಿಂದ ಸೌಕರ್ಯ ಹೆಚ್ಚು. ದೈವಭಕ್ತಿನಿರತರಾದ ಮಹಾಸ್ವಾಮಿಯವರು ಶಾಸ್ತ್ರಿಗಳನ್ನು ಪುರಾಣ ಹೇಳುವ ಕೆಲಸಕ್ಕೆ ನಿಯಮಿಸಿ ಆಗಾಗ

ಅವರನ್ನು ಕೂರಿಸಿಕೊಂಡು ಪುರಾಣ ಶ್ರವಣ ಮಾಡುವರು. ಇದರಿಂದ ಶಾಸ್ತ್ರಿಗಳಿಗೆ ಪುರಾಣದ ನಾರಾಯಣಶಾಸ್ತ್ರಿಗಳೆಂದು ಅಡ್ಡಹೆಸರಾಗಿತ್ತು.

ನಾರಾಯಣಶಾಸ್ತ್ರಿಗಳಿಗೆ ಇಬ್ಬರು ಹೆಣ್ಣುಮಕ್ಕಳು, ಒಬ್ಬ ಮಗ. ಮಗನು ಹುಡುಗಿಯರಿಬ್ಬರಿಗಿಂತ ಚಿಕ್ಕವನು. ಅವನ ಹೆಸರು ಸುಬ್ಬಣ್ಣ ಎಂದು. ಸುಬ್ಬಣ್ಣನು ತಂದೆಯಂತೆ ಸಂಸ್ಕೃತವನ್ನು ಕಲಿತು ಪಂಡಿತ ನಾಗಿದ್ದರೆ ಸುಬ್ರಹ್ಮಣ್ಯಶಾಸ್ತ್ರಿ ಎಂದು ಕರೆದುಕೊಳ್ಳಬಹುದಾಗಿತ್ತು; ಅವನೂ ಪುರಾಣ ಹೇಳಬಹುದಾಗಿತ್ತು. ಆದರೆ ಅವನ ಮನಸ್ಸು ಸಂಸ್ಕೃತದ ಕಡೆ ಹೋಗಲಿಲ್ಲ; ಸಂಗೀತದ ಕಡೆಗೆ ಹೋಯಿತು. ಅವನನ್ನು ಕಂಡಿದ್ದವರೆಲ್ಲ ಅವನನ್ನು ಸುಬ್ಬಣ್ಣ ಎನ್ನುವರೇ ಹೊರತು ಸುಬ್ರಹ್ಮಣ್ಯ ಎಂದು ಕೂಡ ಕರೆಯುತ್ತಿರಲಿಲ್ಲ. ಸಂಸ್ಕೃತ ಕಲಿತವನನ್ನು ಸುಬ್ರಹ್ಮಣ್ಯ ಎನ್ನಬಹುದು; ಸಂಗೀತಕ್ಕಾದರೆ ಇಂಥ ಹೆಸರು ಹೆಚ್ಚು. ಇವನು ಕೊನೆಗೂ ಸುಬ್ಬಣ್ಣನಾಗಿದ್ದನೇ ಹೊರತು ಸುಬ್ರಹ್ಮಣ್ಯಶಾಸ್ತ್ರಿಯಾಗಲಿಲ್ಲ. ಈ ನಮ್ಮ ಕತೆಯು ಈ ಸುಬ್ಬಣ್ಣನ ಬದುಕನ್ನು ಕುರಿತದ್ದು.

ನಾನು ಸುಬ್ಬಣ್ಣನವರನ್ನು ನೋಡಿದ್ದು ಅವರ ಕೊನೆಯ ದಿನಗಳಲ್ಲಿ. ಅವರ ಬಾಲ್ಯದ ಚರಿತ್ರೆಯನ್ನು ನನಗೆ ಅವರೇ ಆಗಾಗ ಸ್ವಲ್ಪ ಸ್ವಲ್ಪವಾಗಿ ಹೇಳಿದರು. ತೊರೆಯಪುರದಲ್ಲಿ ಅವರು ಇದ್ದ ರೀತಿಯನ್ನು ನಮ್ಮ ಮಾವ ನವರು ಚೆನ್ನಾಗಿ ಬಲ್ಲರು; ನಾನೂ ಸ್ವಲ್ಪ ನೋಡಿದ್ದೆ. ಕೊನೆಯ ದಿನಗಳ ವಿಷಯವಂತೂ ನಾನು ಕಣ್ಣಾರೆ ನೋಡಿದ್ದು. ಇನ್ನು ಕೆಲವು ವಿಷಯ ಗಳನ್ನು ಈಚೆಗೆ ಇಲ್ಲಿ ಅಲ್ಲಿ ವಿಚಾರಿಸಿ ತಿಳಿದುಕೊಂಡೆನು. ಸುಬ್ಬಣ್ಣನವರು ಎಂಥ ಮನುಷ್ಯರೆಂಬುದನ್ನು ನಾನು ಈ ಕತೆಯಲ್ಲಿ ಸರಿಯಾಗಿ ವರ್ಣಿಸಿದೇ ನೆಂದು ನಾನು ಹೇಳಲಾರೆ. ಕಠಿನವಾದ ಶಿಲೆಯ ಮಧ್ಯೆ ಸೇರಿರುವ ಸ್ವರ್ಣ ರೇಣುಗಳನ್ನು ತೆಗೆಯಬೇಕಾದರೆ ಕಲ್ಲನ್ನು ಪುಡಿಮಾಡಿ ಚಿನ್ನವನ್ನು ಬೇರೆ ಮಾಡುವ ರಸಗಳಿಂದ ಅದನ್ನು ಪ್ರತ್ಯೇಕಿಸಿ ಅಪರಂಜಿಯಾಗುವುದಕ್ಕೆ ಅದನ್ನು ಕಾಯಿಸುವರು. ಆ ಕಠಿನ ಶಿಲೆಯೆಲ್ಲಿ? ಈ ಅಪರಂಜಿಯೆಲ್ಲಿ? ಮೊದಲಲ್ಲಿ ಕಠಿನತೆಯಿಂದ ಕೂಡಿದ್ದ ಇವರ ಮನಸ್ಸು ದೇವರ ಕೃಪೆಯಿಂದ ನಯ ವಾಗುತ್ತ ಆಗುತ್ತ ಪೂರ್ಣವಾದ ಸಂಸ್ಕಾರವನ್ನು ಪಡೆದು ಕೊನೆಗೆ ಅಪರಂಜಿ

ಯಾಯಿತು. ಅದು ಹೀಗಾದ ವಿಚಿತ್ರ ನ್ಯಾಸವನ್ನು ನಾನು ಹೇಗೆ ವಿವರಿಸಬಹುದು? ಆ ಅಪರಂಜಿಯನ್ನು ಯಾವ ಮಾತುಗಳಿಂದ ಹೊಗಳಿ ನಿಮಗೆ ತಿಳಿಯುವಂತೆ ವರ್ಣಿಸಬಹುದು? ಆದರೆ ಈ ರೀತಿಯ ನ್ಯಾಸವು ದಿನವೂ ನಡೆಯುತ್ತಿರುವುದನ್ನು ನೋಡಿ ಬಲ್ಲವರಿಗೆ ನಾನು ಹೇಳುವ ಸ್ವಲ್ಪದರಿಂದಲೇ ಸುಬ್ಬಣ್ಣನವರ ಜೀವನ ಚರಿತೆಯ ಪೂರ್ಣವಾದ ಭಾವನೆಯು ಉಂಟಾಗಬಹುದು. ಹೇಗಾದರೂ ಓದುವವರೇ ಊಹಿಸಿ ಸೇರಿಸಿಕೊಳ್ಳಬಹುದಾದ ಬಹು ಭಾಗದಿಂದ ಮಾತ್ರ ಈ ಕತೆಯು ಸಂಪೂರ್ತಿಯಾಗಬಹುದೇ ಹೊರತು ಇಲ್ಲಿ ಹೇಳಿರುವಷ್ಟರಿಂದ ಮಾತ್ರ ಸಂಪೂರ್ತಿಯಾಗಲಾರದು.

೨

ಸುಬ್ಬಣ್ಣನು ಸುಬ್ರಹ್ಮಣ್ಯಶಾಸ್ತ್ರಿಯಾಗಲಿಲ್ಲವೆಂದು ಹೇಳಿದೆ. ಇದೇ ಪ್ರಾಯಶಃ ಈ ಕತೆಯೆಲ್ಲದರ ಸಾರಾಂಶವೆಂದು ಹೇಳಬಹುದು. ಮಗ ಹುಟ್ಟಿದಾಗ ನಾರಾಯಣಶಾಸ್ತ್ರಿಗಳಿಗೆ ಬಹಳ ಸಂತೋಷ. ಆವರೆಗೆ ಅವರಿಗೆ ಮೂರು ಹೆಣ್ಣುಮಕ್ಕಳಾಗಿದ್ದು ಒಂದು ಹೋಗಿತ್ತು. ನಾಲ್ಕನೆಯದೂ ಹೆಣ್ಣಾಗಿದ್ದರೆ ಏನುಮಾಡುವಂತಿತ್ತು? ಹಾಗಾಗದೆ ಪುತ್ರೋತ್ಸವವು ನಿಜವಾಗಿಯೂ ಪುತ್ರೋತ್ಸವವೇ ಆದದ್ದರಿಂದ ಅವರು ಬಹಳ ಸಂತುಷ್ಟರಾದರು. ಶಾಸ್ತ್ರಿಗಳ ಯಜಮಾನಿಗೂ ಹಾಗೆಯೆ. ಈ ಕಾರಣದಿಂದ ಇಬ್ಬರೂ ಹುಡುಗನನ್ನು ಅತಿಶಯವಾದ ಪ್ರೇಮದಿಂದ ಸಾಕಿದರು. ಹುಡುಗನಿಗೆ ಏಳೆಂಟು ವರುಷಗಳಾದುವು. ಶಾಸ್ತ್ರಿಗಳು ಅಕ್ಷರಗಳನ್ನು ಹೇಳಿಕೊಟ್ಟರು; ಒಂದೆರಡು ಸರ್ಗ ಅಮರಕೋಶವನ್ನು ಹೇಳಿಕೊಟ್ಟರು. ಆದರೆ ವಿದ್ಯೆ ಮುಂದಕ್ಕೆ ಸಾಗಲಿಲ್ಲ. ಮೊದಲಿಂದ ಹುಡುಗನಿಗೆ ಅದು ಏನೋ ಸಂಗೀತದ ಮೇಲೆ ಬುದ್ಧಿಹೋಯಿತು. ಅವನಿಗೆ ತಂದೆಯ ಗಂಭೀರವಾದ ಮಧುರವಾದ ಧ್ವನಿಯು ಇಳಿದುಬಂದಿತ್ತು; ಅವರ ಸಂಸ್ಕೃತ ಇಳಿದುಬರಲಿಲ್ಲ. ಏಳು ವರುಷದ ಹುಡುಗ ಯಸ್ಯಜ್ಞಾನ ದಯಾಸಿಂಧೋ ಎಂದು ಎಲ್ಲಿಲ್ಲದ ರಾಗಗಳಲ್ಲಿಯಾದರೂ ಹಾಡುವನು. ಆದರೆ ಅದರ ಅರ್ಥದ ಕಡೆ ಅವನ ಮನಸ್ಸು ಹೋಗುತ್ತಿರಲಿಲ್ಲ. ತಂದೆ ಮಗನನ್ನು

ಮನೆಯಲ್ಲಿ ಪಾಠಕ್ಕೆ ಕೂರಿಸಿ ಎಲ್ಲಿಯಾದರೂ ಹೋದರೆ ಇವನು ಹಾಡು ತಿದ್ದಿಕೊಳ್ಳುವುದರಲ್ಲಿ ಪಾಠವನ್ನೇ ಮರೆಯುವನು. ಮೊದಮೊದಲಲ್ಲಿ ಹುಡುಗನು ಶ್ಲೋಕಗಳನ್ನು ಚೆನ್ನಾಗಿ ಹೇಳುವನೆಂಬ ಜಂಭದಿಂದ ತಂದೆಯೂ ತಾಯಿಯೂ ಮನೆಗೆ ಬಂದವರ ಹತ್ತಿರವೆಲ್ಲ ಇವನನ್ನು ನಿಲ್ಲಿಸಿ ಇವನಿಂದ ಹಾಡಿಸುವರು. ಜನರು ಕೇಳಿ ಶಾಭಾಸ್ ಎನ್ನುವರು. ಅವರು ಹೀಗೆ ಎಂದಷ್ಟೂ ಹುಡುಗನು ಅದರಲ್ಲೇ ನಿಲ್ಲುವಂತೆ ಆಯಿತು. ಹೀಗೆ ಸುಬ್ಬಣ್ಣನಿಗೆ ಚಿಕ್ಕಂದಿನಲ್ಲೇ ಸಂಸ್ಕೃತದಲ್ಲಿ ಅಶ್ರದ್ಧೆಯೂ ಸಂಗೀತದಲ್ಲಿ ಅಭಿಲಾಷೆಯೂ ಸಿದ್ಧವಾದುವು.

ಸಂಗೀತದಲ್ಲಿ ಇವನಿಗೆ ಸಹಜವಾಗಿದ್ದ ಅಭಿಲಾಷೆಯು ಅರಮನೆಯಲ್ಲಿ ಒಂದು ಸಲ ನಡೆದ ಒಂದು ಸಂಗತಿಯಿಂದ ಮತ್ತಷ್ಟು ಸ್ಥಿರವಾಯಿತು. ಒಂದು ದಿನ ಶಾಸ್ತ್ರಿಗಳು ತಮ್ಮ ಮಗನನ್ನು ಕರೆದುಕೊಂಡುಹೋಗಿ ರಾಣೀವಾಸದ ಮುಂದೆ ಪುರಾಣವನ್ನು ಹೇಳುತ್ತಿರುವಾಗ ಅವನಿಂದ ಶುಕ್ಲಾಂಬರಧರಂ ಎಂಬ ಶ್ಲೋಕವನ್ನು ಹೇಳಿಸಿದರು. ಎಲ್ಲರೂ ಬಹಳ ಮೆಚ್ಚಿದರು. ಸ್ವಲ್ಪ ಹೊತ್ತಿನ ಮೇಲೆ ಮಹಾರಾಜರು ದಯಮಾಡಿಸಿ ಪುರಾಣವನ್ನು ಕೇಳುತ್ತಾ ಕುಳಿತರು. ಸುಬ್ಬಣ್ಣ ತಂದೆಯ ಬಳಿಯಲ್ಲೇ ಕುಳಿತು ಅವರು ಹೇಳುತ್ತಿದ್ದ ಒಂದೊಂದು ಮಾತನ್ನೂ ಬಹಳ ಕುತೂಹಲ ದಿಂದ ಕೇಳುತ್ತಾ ಆಗಾಗ ಮಹಾರಾಜರ ಕಡೆ ತಿರುಗಿ ಅವರ ಆ ಸುಂದರ ವಾದ ಮುಖದ ದೊಡ್ಡ ತಿಲಕವನ್ನೂ ವಿಶಾಲವಾದ ಗಂಡಸ್ಥಲಕ್ಕೆ ಒಂದು ತರದ ಚಂದವನ್ನು ಕೊಡುತ್ತಿದ್ದ ಅವರ ಮೀಸೆಯನ್ನೂ ಅತ್ಯಾತುರದಿಂದ ನೋಡುತ್ತಿದ್ದನು. ರಾಜರು ಹುಡುಗನನ್ನು ಎರಡು ಮೂರು ಸಲ ನೋಡಿ ಬಹಳ ಸುಟಿಯಾಗಿದ್ದಾನೆ ಎಂದುಕೊಂಡರು. ಪುರಾಣ ಮುಗಿದಮೇಲೆ ಶಾಸ್ತ್ರಿಗಳನ್ನು "ಈ ಹುಡುಗ ನಿಮ್ಮ ಕುಮಾರನೋ, ಶಾಸ್ತ್ರಿಗಳೆ" ಎಂದರು. ಶಾಸ್ತ್ರಿಗಳು "ಹೌದು, ಮಹಾಪ್ರಭು" ಎಂದರು. ರಾಜರು ನಗುತ್ತಾ ಹುಡುಗನನ್ನು "ಏನಪ್ಪಾ ನೀನೂ ಅಪ್ಪಾಜಿಹಾಗೆ ಪುರಾಣ ಹೇಳೀಯೋ?" ಎಂದು ಕೇಳಿದರು. ಹುಡುಗ "ನಾನು ಪುರಾಣ ಹೇಳೋಲ್ಲ; ಸಂಗೀತ ಹೇಳ್ತೇನೆ" ಎಂದ. ರಾಜರು "ಆಹಾ, ಹಾಗೇ ಅದು ; ಎಲ್ಲಿ ಹೇಳು ನೋಡೋಣ" ಎಂದರು. ಸುಬ್ಬಣ್ಣ "ಶ್ರೀರಾಘವಂ

ದಶರಥಾತ್ಮಜಂ" ಎಂಬುದನ್ನು ರಾಗವಾಗಿ ಹೇಳಿ "ಕಸ್ತೂರೀತಿಲಕಂ ಬರುತ್ತೆ" ಎಂತ ಹೇಳಿದ. ರಾಜರಿಗೆ ಬಹಳ ಸಂತೋಷವಾಯಿತು. ಒಂದು ತಟ್ಟೆಯಲ್ಲಿ ಎಲೆ ಅಡಿಕೆ ತರಿಸಿ ಅದರಲ್ಲಿ ಒಂದು ವಸ್ತ್ರವನ್ನು ಇಟ್ಟು ಹುಡುಗನಿಗೆ ಕೊಟ್ಟು "ನೀನು ಒಳ್ಳೇ ಬುದ್ಧಿವಂತ. ಚೆನ್ನಾಗಿ ಹಾಡು ವುದನ್ನು ಕಲಿತುಕೊ. ನಿನಗೆ ಖಿಲ್ಲತ್ತು ಕೊಡುತ್ತೇವೆ" ಎಂದು ಹೇಳಿ ಶಾಸ್ತ್ರಿಗಳಿಗೆ "ಹುಡುಗ ಒಳ್ಳೆ ಸುಟಿ ಶಾಸ್ತ್ರಿಗಳೆ—ಚೆನ್ನಾಗಿ ತರಬೇತ್ ಮಾಡಿ. ಒಲೇ ಹುಡುಗನಾಗುತ್ತಾನೆ" ಎಂದು ಅಪ್ಪಣೆ ಕೊಟ್ಟರು. ಶಾಸ್ತ್ರಿಗಳೂ ಮಗನೂ ಮನೆಗೆ ಬಂದುಬಿಟ್ಟರು.

ಸಂಗೀತ ಕಲಿತು ಮಹಾರಾಜರಲ್ಲಿ ಖಿಲ್ಲತ್ತು ಪಡೆಯಬೇಕೆಂದು ಸುಬ್ಬಣ್ಣನಿಗೆ ಅಂದಿನಿಂದ ಒಂದು ಗೀಳು ಹಿಡಿಯಿತು. ಸುಬ್ಬಣ್ಣನವರು ನಾನು ನೋಡಿದಾಗಲೂ ಯಾವುದನ್ನು ಹಿಡಿದರೂ ಕೊನೆಮುಟ್ಟಿಸುವ ಒಂದು ಹಠದ ಮನುಷ್ಯರಾಗಿದ್ದರು. ಹುಡುಗನಾಗಿದ್ದಾಗಲೂ ಅವರಲ್ಲಿ ಇದೇ ಹಠ ಇದ್ದಿರಬೇಕು. ಮಹಾರಾಜರನ್ನು ಮೆಚ್ಚಿಸುವ ಚಪಲಕ್ಕಾಗಿ ಹುಡುಗ ಎಲ್ಲಿ ಸಂಗೀತವಾದರೆ ಅಲ್ಲೆಲ್ಲ ಹೋಗಿ ಕುಳಿತುಕೊಂಡು ಕೇಳುವನು. ಅಲ್ಲಲ್ಲಿ ಸಣ್ಣ ಗುಂಪುಗಳಲ್ಲಿ ಹಾಡುವನು. ಹೀಗೆ ಹದಿನಾಲ್ಕು ವರ್ಷ ವಯಸ್ಸಾಗುವ ವೇಳೆಗೆ ಅವನಿಗೆ ಸಂಗೀತದಲ್ಲಿ ಒಂದು ಅದ್ಭುತವಾದ ಪರಿಚಯವುಂಟಾಯಿತು. ಸಂಗೀತಗಾರರು ಅವನಿಗೆ ಮೊದಮೊದಲು ವಿಶ್ವಾಸದಿಂದಲೂ ಬರಬರುತ್ತಾ ಅರೆಮರೆಯ ಈರ್ಷೆಯಿಂದಲೂ ತೋರಿ ಬರುವ ಗೌರವವನ್ನು ತೋರಿಸುವುದಕ್ಕೆ ಆರಂಭಿಸಿದರು. ಬಾಯ ಹಾಡುಗಾರಿಕೆಯಲ್ಲೇ ಅಲ್ಲದೆ ಸುಬ್ಬಣ್ಣನಿಗೆ ಪಿಟೀಲು ವೀಣೆಗಳನ್ನು ನುಡಿಸುವುದರಲ್ಲಿಯೂ ಮೃದಂಗವನ್ನು ಬಾರಿಸುವುದರಲ್ಲಿಯೂ ಅತಿಶಯ ವಾದ ಶಕ್ತಿಯಿತ್ತು. ತಂದೆ ಉದ್ದಕ್ಕೂ ಮಗನಿಗೆ ಸಂಸ್ಕೃತ ಹೇಳಿಕೊಡಲು ನೋಡುತ್ತ, ಪುರಾಣದ ಮಾತನ್ನೇ ಆಡುತ್ತಿದ್ದದ್ದರಿಂದ ಹುಡುಗ ತಾನು ಸಂಗೀತಕ್ಕೆ ಹೋಗುತ್ತಿದ್ದುದನ್ನು ಅವರಿಗೆ ಸಾಮಾನ್ಯವಾಗಿ ತಿಳಿಸು ತ್ತಿರಲಿಲ್ಲ. ಮಗನಿಗೆ ಸಂಸ್ಕೃತದಲ್ಲಿ ತಿಳಿವು ಬರಲಿಲ್ಲವಲ್ಲಾ ಎಂದು ಅವರು ವ್ಯಥೆಪಡುತ್ತಿದ್ದರೇ ಹೊರತು ಅವನಿಗೆ ಇಷ್ಟು ಸಂಗೀತ ಬಂದಿದೆಯೆಂದು ಅವರಿಗೆ ತಿಳಿಯುವುದಕ್ಕೆ ಅವಕಾಶವಾಗಲಿಲ್ಲ. ಗುಟ್ಟಾಗಿ ಎಲ್ಲವನ್ನೂ

ಕಲಿತು ಒಂದೇ ಸಲ ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡಿಬಿಡಬೇಕೆಂಬ ಉದ್ದೇಶದಿಂದ ಹುಡುಗ ತಾನು ಮಾಡುತ್ತಿದ್ದ ಕೆಲಸವನ್ನು ಮನೆಯಲ್ಲಿ ಕೂಡ ಯಾರಿಗೂ ಹೇಳಲಿಲ್ಲ.

ಸುಬ್ಬಣ್ಣ ತಾನು ಸಂಗೀತಕ್ಕೆ ಹೋಗುತ್ತಿದ್ದ ವಿಷಯವನ್ನು ಮನೆಯಲ್ಲಿ ಹೇಳದಿರುವುದಕ್ಕೆ ಇನ್ನೊಂದು ಕಾರಣವಿತ್ತು. ಸಂಗೀತದ ಕಚೇರಿಗಳು ನಡೆಯುವುದು ಕೆಲವು ವೇಳೆ ಆ ವಿದ್ವಾಂಸರ ಮನೆಗಳಲ್ಲಿ; ಅನೇಕ ವೇಳೆ ವಾರಸ್ತ್ರೀಯರ ಮನೆಗಳಲ್ಲಿ. ಸಂಗೀತದ ಅಭಿಲಾಷೆ ಬಲವಾದ ಹಾಗೆ ಸುಬ್ಬಣ್ಣನು ಅದು ಎಲ್ಲಿ ನಡೆದರೆ ಅಲ್ಲಿ ಹೋಗುವುದಕ್ಕೆ ಮೊದಲು ಮಾಡಿದನು. ಅವನಿಗೆ ಕೊಂಚ ದಿನದಲ್ಲೇ ಮೈಸೂರಿನ ವಾರಸ್ತ್ರೀಯರ ಮನೆಗಳಿಗೆಲ್ಲಾ ಹೋಗಿಬರುವಂತೆ ದಾರಿಯಾಯಿತು. ಹುಡುಗನಾದರೂ ಚೆಲುವ. ಸ್ವಲ್ಪ ಅಗಲವಾದ ಮುಖ; ಹೊಳಪಾದ ಕಣ್ಣುಗಳು; ಕಪ್ಪಗೆ ತುಂಬ ಕೂದಲಿರುವ ಹುಬ್ಬುಗಳು; ಮೇಲ್ತುಟಿಯ ಮೇಲೆ ಆಗತಾನೇ ತಲೆದೋರುತ್ತಿದ್ದ ತೆಳ್ಳಗಿರುವ ಕುಡಿಮೀಸೆ. ತಿಂಗಳಿಗೆ ಎರಡು ತಿಂಗಳಿಗೆ ಒಂದುಸಲ ಕ್ಷೌರಮಾಡಿಸಿಕೊಳ್ಳುವುದರಿಂದ ಇದು ಚೆನ್ನಾಗಿ ಕಾಣುವುದು. ಕೆಂಪಗೆ ಕುಂಕುಮ ಸವರಿದಂತೆ ಇರುವ ರಂಗಿನ ತುಟಿ. ನಿತ್ಯಕರ್ಮಗಳನ್ನು ಲೋಪವಿಲ್ಲದೆ ಮಾಡುತ್ತಿದ್ದುದರಿಂದ ಮುಖಕ್ಕೆ ಬಂದಿದ್ದ ಒಂದು ಅವರ್ಣ ನೀಯವಾದ ವರ್ಚಸ್ಸು. ಇದೆಲ್ಲದರ ಜೊತೆಗೆ ಇನ್ನೂ ದೋಷವನ್ನರಿಯದೆ ತಾಯ ಎದೆಯ ಬಳಿ ಮುಖವನ್ನಿಟ್ಟು ಸ್ತನ್ಯಕ್ಕಾಗಿ ಅರಸುವ ಮಗುವಿನಂತೆ ಜೀವನದ ವಿಚಾರವನ್ನು ತಿಳಿಯದೆ ಇಲ್ಲಿ ಏನಿದೆಯೋ ಎಂದು ತಿಳಿಯಲು ಯತ್ನವನ್ನು ಮಾಡುತ್ತಿರುವ ಪೂರ್ವ ಯೌವನದ ಆ ಒಂದು ಸರಳತೆ. ಇದನ್ನು ನೋಡಿದ ಯಾರುತಾನೆ ಇವನಲ್ಲಿ ಮೋಹಗೊಳ್ಳರು? ವಾರ ಸ್ತ್ರೀಯರಿಗೆ ಇವನ ವಿಷಯದಲ್ಲಿ ಅಸಾಧಾರಣವಾದ ಮಮತೆಯುಂಟಾ ಗಿತ್ತು. ಇವನು ಹೋದಾಗ ಅವರು ಇವನಿಗೆ ಹಾಲು ಹಣ್ಣು ತಂದು ಕೊಡುವರು. ಒಂದು ಹಾಡು ಹೇಳೆಂದು ಕೇಳುವರು. ನೀನು ಹಾಡು ಎಂದು ಅವನು ಕೇಳಿದರೆ, ಸಂತೋಷವಾಗಿ ಹಾಡಿ ಅವನನ್ನು ಸಂತೋಷ ಪಡಿಸುವರು. ಹೀಗೆ ಹದಿನೈದು ವರುಷಗಳ ವೇಳೆಗೆ ಸುಬ್ಬಣ್ಣನು ತಂದೆಗೆ ತಿಳಿಯದಂತೆ ಸಂಗೀತದಲ್ಲಿ ಗಣ್ಯನಾಗಿ ಸಂಗೀತಗಾರರ ಸಮುದಾಯದಲ್ಲಿ

ಸೇರಿಹೋದನು. ಅವನಿಗೆ ಆ ಪ್ರಪಂಚದಲ್ಲಿ ಎಲ್ಲಾ ಕಡೆಗೂ ಹೋಗುವ ಅಧಿಕಾರವು ಬಂದುಬಿಟ್ಟಿತು.

ಇದಕ್ಕೆ ಮೊದಲೇ ಸುಬ್ಬಣ್ಣನಿಗೆ ಮದುವೆಯಾಗಿತ್ತು. ಅವನ ಹೆಂಡತಿಯ ಹೆಸರೇನೋ ನನಗೆ ಇನ್ನೂ ಖಂಡಿತವಾಗಿ ಗೊತ್ತಿಲ್ಲ. ನಾನು ನೋಡಿದಾಗ ಸುಬ್ಬಣ್ಣನವರು ಆಕೆಯ ಮಾತನ್ನು ಯಾವಾಗ ಎತ್ತಿದರೂ "ಅವರು" ಎಂದು ಹೇಳುತ್ತಿದ್ದರು. ನನಗೆ ಯಾವಾಗಲೂ ಆಕೆಯ ಹೆಸರೇನೆಂದು ಕೇಳುವುದಕ್ಕೆ ಮನಸ್ಸು ಬರಲಿಲ್ಲ. ಅವರು ಒಂದು ಸಲ "ಲಲಿತಾ ಎನ್ನುವ ಹೆಸರು ನೋಡಿ, ಅಮ್ಮನವರಿಗೆ ಒಪ್ಪಿದ ಹೆಸರು. ಅದಕ್ಕೇ ಆಚಾರ್ಯರು ಸಹಸ್ರನಾಮವನ್ನು ಲಲಿತಾ ಸಹಸ್ರನಾಮವೆಂದು ಕರೆದರು. ತಾಯಿ ಲಲಿತಾ ಅಲ್ಲದಿದ್ದರೆ ನಮ್ಮೆಲ್ಲರ ಗತಿಯೇನು?" ಎಂದರು; ಸ್ವಲ್ಪ ಹೊತ್ತಿನಮೇಲೆ "ಆ ಹೆಸರಿನ ಹೆಂಗಸರೂ ಹಾಗೆಯೆ. ಲೋಕಮಾತೆಯ ಅಂಶದ ಹಾಗೆ ಇರುತ್ತಾರೆ" ಎಂದರು. ಹಾಗೆ ಹೇಳುವಾಗ ಅವರ ದೃಷ್ಟಿಯು ಎಲ್ಲೋ ದೂರದಲ್ಲಿತ್ತು. ಕನಸಿನಲ್ಲಿಯ ಕನಸೆಂಬಂತೆ ಎಂದೋ ಇದ್ದುಹೋದ ತನ್ನ ಪತ್ನಿಯನ್ನು ನೆನೆದುಕೊಂಡು ಅವರು ಹಾಗೆ ಹೇಳುತ್ತಿದ್ದರೆಂದು ಆಗ ನನಗೆ ತೋರಿತು. ಆದದ್ದರಿಂದ ಇಲ್ಲಿ ಅವರ ಹೆಂಡತಿಯ ಹೆಸರು ಲಲಿತಾ ಎಂದು ಇಟ್ಟುಕೊಳ್ಳಬಹುದು. ಸುಬ್ಬಣ್ಣನವರಿಗೆ ಹದಿನೇಳು ವರುಷವಾಗುವ ವೇಳೆಗೆ ಹೆಂಡತಿ ಮನೆಗೆ ಬಂದಳು. ಶಾಸ್ತ್ರಿಗಳ ಸಂಪಾದನೆಯಿಂದಲೇ ಮನೆಯಲ್ಲಿ ಜೀವನ. ಸುಬ್ಬಣ್ಣ ಏನನ್ನೂ ಸಂಪಾದಿಸುವಹಾಗಿರಲಿಲ್ಲ. ಸಂಗೀತವನ್ನು ಕಲಿತವನು ಸಂಪಾದನೆ ಮಾಡುವುದೆಂದರೆ ಬಹಳ ದಿನ ಕಳೆಯಬೇಕು. ಸಂಸ್ಕೃತವನ್ನು ಸ್ವಲ್ಪ ಕಲಿತಿದ್ದರೆ ಪೌರೋಹಿತ್ಯವನ್ನೋ ಇತರ ಯಾವುದಾದರೂ ಕೆಲಸವನ್ನೋ ಮಾಡಬಹುದಾಗಿತ್ತು; ಪುರಾಣವನ್ನು ಹೇಳಬಹುದಾಗಿತ್ತು. ಸುಬ್ಬಣ್ಣನು ಸಂಗೀತಕ್ಕೆ ಬಾಳನ್ನು ಅರ್ಪಿಸಿ ಇಂಥ ಸಂಪಾದನೆಗೆ ದಾರಿ ಇಲ್ಲದಂತೆ ಮಾಡಿಕೊಂಡನು. ಇದರಿಂದ ಸುಬ್ಬಣ್ಣ ವಯಸ್ಕನಾದ ಮಗನಾದರೂ ಶಾಸ್ತ್ರಿಗಳಿಗೆ ಅವನಿಂದ ಏನೂ ಸಹಾಯವಿಲ್ಲದೆ ಹೋಯಿತು. ನಾಲದ್ದಕ್ಕೆ ಇವನ ಸಂಸಾರ ಬೇರೆ. ತಂದೆ ಎಷ್ಟೇ ಒಳ್ಳೆಯವನಾದರೂ ಬೆಳೆದ ಮಗ ಭಾರವಾಗಿ ಮನೆಯಲ್ಲಿ ಕೂತರೆ ಸುಮ್ಮನೆ ಇರುವುದಕ್ಕಾಗು

ತ್ತದೆಯೆ? ಶಾಸ್ತ್ರಿಗಳು ಒಂದೊಂದು ಸಲ ಮಗನನ್ನು ಏನಾದರೂ ಎನ್ನುವರು. ಮಗನು ಬಹಳ ದಿನ ತಡೆದು ತಡೆದು ಕೊನೆಗೆ ಒಂದು ದಿನ "ಸುಮ್ಮನೆ ನನ್ನನ್ನು ಅನ್ನುವುದು ಯಾತಕ್ಕೆ? ನನಗೆ ಅನ್ನ ಹಾಕುವುದಕ್ಕೆ ಆಗದಿದ್ದರೆ ಹೇಳಿ. ಹೊರಟುಹೋಗುತ್ತೇನೆ. ನನ್ನ ಹೊಟ್ಟೆಹೊರೆದು ಕೊಳ್ಳುವುದಕ್ಕೆ ನನಗೇನೂ ಕಷ್ಟವಿಲ್ಲ" ಎಂದನು. "ನೀನು ಹೋದರೆ ನಿನ್ನ ಹೆಂಡತಿಯನ್ನು ಸಾಕುವವರು ಯಾರು? ಅವಳನ್ನೂ ಕರೆದುಕೊಂಡು ಹೋಗುತ್ತೀಯಾ?" ಎಂದು ಅವರ ತಾಯಿ ಕೇಳಿದರು. "ನನಗೆ ಮದುವೆ ಮಾಡಿ ಎಂತ ಹೇಳಿದವರು ಯಾರು? ನಾನು ಕೇಳಿದೆನೇ? ನೀವೇ ಮದುವೆ ಮಾಡಿದಿರಿ; ಸಾಕಿ; ಸಾಕದೆ ಇದ್ದರೆ ಅವರ ತಂದೆಯ ಮನೇಲಿ ಬಿಡಿ" ಎಂದು ಸುಬ್ಬಣ್ಣ ಹೇಳಿದನು. ಮನೆಯಲ್ಲಿ ಆ ದಿನ ರಾದ್ಧಾಂತ. ಜಗಳ ವಾದ ಮೇಲೆ ಸುಬ್ಬಣ್ಣ ಎಲ್ಲೋ ಹೊರಟುಹೋದನು. ಮನೆಯಲ್ಲಿ ಊಟಮಾಡಲಿಲ್ಲ. ಲಲಿತಮ್ಮನೂ ಊಟಮಾಡಲಿಲ್ಲ. ತಂದೆ ಇಷ್ಟವಿದ್ದೂ ಇಲ್ಲದೆಯೂ ಎರಡು ತುತ್ತು ತಿಂದು ಎಲ್ಲೋ ಹೊರಟುಹೋದರು. ಮನೆಯ ಯಜಮಾನಿತಿ ಸೊಸೆಯನ್ನು ಊಟಮಾಡೆಂದು ಬಹಳ ಹೇಳಿ ಅವಳು ಒಪ್ಪದೆ ಇರಲು "ಇನ್ನು ನಿಮಗೆ ಅನ್ನ ಬೇಡದ ಮೇಲೆ ನಾನು ಹೇಗೆ ತಿನ್ನಲಿ" ಎಂದು ತಾನೂ ಹಸಿದುಕೊಂಡಿದ್ದರು. ಶಾಸ್ತ್ರಿಗಳೂ ಅವರ ಹೆಂಡತಿಯೂ ಅಂದು ಮಗನನ್ನು ಹೆತ್ತ ಸುಖದ ಒಂದು ರೀತಿಯನ್ನು ಹೊಸದಾಗಿ ಅನುಭವ ಮಾಡಿದಹಾಗಾಯಿತು.

ಸುಬ್ಬಣ್ಣ ಈಗಾಗಲೇ ಸಂಪಾದನೆ ಮಾಡಿಕೊಳ್ಳದಿದ್ದರೂ ಸಂಗೀತದಲ್ಲಿ ಪಾಂಡಿತ್ಯವನ್ನು ಪಡೆದಿದ್ದನು. ಮುಂದಿನ ನವರಾತ್ರಿಯಲ್ಲಿ ಅವನು ಮಹಾರಾಜರ ಮುಂದೆ ಹಾಡುವುದಕ್ಕೆ ಏರ್ಪಾಡು ಮಾಡುವುದಾಗಿ ವೀಣೆ ಭಕ್ಷಿಗಳು ಅವನಿಗೆ ವಾಗ್ದಾನ ಮಾಡಿದ್ದರು; ಆದ್ದರಿಂದ ಅವನು ಎಂದಿಗಿಂತ ಹೆಚ್ಚಾಗಿ ಸಂಗೀತವನ್ನು ಅಭ್ಯಾಸಮಾಡುತ್ತಿದ್ದನು. ಹಾಡು ಕೂಗುವುದಕ್ಕೆ ಮನೆಯಲ್ಲಿ ಅನುಕೂಲವಿಲ್ಲ. ಅಲ್ಲದೆ ಅದಕ್ಕೆ ತಕ್ಕ ಉತ್ತೇಜನವಿಲ್ಲ. ಆದುದರಿಂದ ಅವನು ಹಾಡುವುದನ್ನು ಅಭ್ಯಾಸಮಾಡುವುದಕ್ಕೆ ಒಬ್ಬ ವೇಶ್ಯೆಯ ಮನೆಗೆ ಹೋಗುತ್ತಿದ್ದನು. ಅವನು ವೇಶ್ಯೆಯರ ಸಂಬಂಧದಿಂದ ಕೆಟ್ಟನೋ ಬಿಟ್ಟನೋ ನಾನು ಹೇಳಲಾರೆ. ನನಗೆ ತಿಳಿಯದು. ಇಷ್ಟಕ್ಕೆ

ಕೆಡುವುದೆಂದರೇನೋ ನಾನು ಕಾಣೆ. ನೀಲಾನಾನಿಯಾದರೋ ಸುಬ್ಬಣ್ಣ ನನ್ನು ಅವನ ಹಾಡುಗಾರಿಕೆಗಾಗಿಯೂ ಅವನು ಬ್ರಾಹ್ಮಣನಾದದ್ದ ರಿಂದಲೂ ದೇವರಂತೆ ಕಾಣುತ್ತಿದ್ದಳು. ಅವಳಿಗೆ ಹಣಕ್ಕೆ ಕಡಿಮೆಯಿರಲಿಲ್ಲ; ಬೇಕಾದವರೂ ಬಹಳ ಜನ; ಆದರೆ ಇವನ ವಿಷಯದಲ್ಲಿ ಬಹಳ ವಿಶ್ವಾಸ, ಭಕ್ತಿ. ಅವಳು ಸ್ವಭಾವವಾಗಿ ಗೋಪಸ್ತ್ರೀ; ಕೃಷ್ಣದೇವರ ಉಪಾಸಕಳು. ಸುಂದರಾಕಾರನೂ ವರ್ಚಸ್ವಿಯೂ ಆದ ಸುಬ್ಬಣ್ಣನನ್ನು ನೋಡಿ ಇವನು ಪ್ರತ್ಯಕ್ಷವಾಗಿ ಬಂದ ಕೃಷ್ಣನೆಂದೇ ಅವಳು ಭಾವಿಸಿದ್ದಳು. ಅವನು ಬಂದರೆ ನೀಲಾ ಅವನಿಗೆ ಕಾಲು ತೊಳೆದುಕೊಳ್ಳುವುದಕ್ಕೆ ನೀರನ್ನು ಕೊಡುವಳು. ದೊಡ್ಡದಾದ ತನ್ನ ಮನೆಯ ಮಹಡಿಯ ಮೇಲೆ ಅವಳು ಸುಬ್ಬಣ್ಣನಿಗೆ ಒಂದು ಕೊಠಡಿಯನ್ನು ಬಿಟ್ಟುಕೊಟ್ಟಿದ್ದಳು. ಅಲ್ಲಿ ಕುಳಿತುಕೊಳ್ಳುವುದಕ್ಕೆ ಮಣೆ, ರತ್ನಗಂಬಳಿ, ಒರಗುದಿಂಬು, ಅಭ್ಯಾಸಕ್ಕೆ ಬೇಕಾದ ಪಿಟೀಲು, ಮೃದಂಗ ಇವೆಲ್ಲವನ್ನೂ ಇರಿಸಿರುವಳು. ಅಲ್ಲಿ ಒಂದು ಮಂಚಿಗೆಯ ಮೇಲೆ ಒಂದು ಮಡಿಚೀಲದಲ್ಲಿ ಬ್ರಾಹ್ಮಣರಿಂದ ಮಾಡಿಸಿದ ತಿಂಡಿಯೊಂದಿಷ್ಟನ್ನು ಸಿದ್ಧವಾಗಿ ಯಾವಾಗಲೂ ಇರಿಸಿಯೇ ಇರುವಳು. ಸುಬ್ಬಣ್ಣ ಕೈಕಾಲು ತೊಳೆದುಕೊಂಡು ಬಂದು ಕುಳಿತುಕೊಂಡರೆ ನೀಲಾ ಕೊಠಡಿಗೆ ಒಂದು ದೂರದಲ್ಲಿ ಕುಳಿತು ಹತ್ತು ನಿಮಿಷದ ಹೊತ್ತು ನಗುತ್ತ ಮಾತನಾಡಿಸಿ ಇನ್ನು ತಾವು ಅಭ್ಯಾಸಮಾಡಿ ಎಂದು ಹೇಳಿ ಮನೆಯೊಳಗೆ ಹೊರಟು ಹೋಗುವಳು. ಸುಬ್ಬಣ್ಣ ತನ್ನಷ್ಟಕ್ಕೆ ತಾನೆ ಕುಳಿತು ಪಿಟೀಲನ್ನು ನುಡಿಸುತ್ತ ತನಗೆ ತೋರಿದ ಸಂಗತಿ ವರೇಕುಗಳನ್ನು ಹಾಕುತ್ತ ಯಾವುದು ಹೇಗೆ ಆಗುತ್ತದೆ ಎಂದು ನೋಡುತ್ತ ಎಷ್ಟು ಹೊತ್ತು ಹೋಯಿತೆಂಬು ದನ್ನು ಕಾಣದೆ ಗಾನಯೋಗದಲ್ಲಿ ಮಗ್ನನಾಗಿರುವನು. ಬಹಳ ದಿನ ಊಟದ ಹೊತ್ತಿಗೆ ನೀಲಾ ಬಂದು "ದೇವರಿಗೆ ಮನೆಗೆ ಹೋಗೋ ಹೊತ್ತಾಯಿತು" ಎಂದು ಹೇಳದೇ ಇದ್ದರೆ ಅವನಿಗೆ ಮನೆಗೆ ಹೋಗೋಣ ವೆಂದೂ ತೋರಿರಲಾರದು.

ಆ ದಿನ ಮನೆಯಲ್ಲಿ ಜಗಳವಾದ ಮೇಲೆ ಸುಬ್ಬಣ್ಣ ನೀಲಾನಾನಿಯ ಮನೆಗೆ ಹೋದನು. ಅವನಿಗೆ ಮನಸ್ಸಿನಲ್ಲಿ ಬಹು ಕಾರಣದಿಂದ ಅಸಮಾ ಧಾನ. ತಾನು ಒಬ್ಬರಿಗೆ ಹೊರೆಯಾಗಿದೇನಲ್ಲಾ ಎಂಬುದು ಮೊದಲು

ಕಾರಣ. ಇದು ಎಲ್ಲರಿಗೂ ಬರುವ ಅತೃಪ್ತಿ. ಬಾಲ್ಯದಲ್ಲಿ ನಾವೆಲ್ಲ ನಮ್ಮ ತಂದೆಯ ಮನೆಯಲ್ಲೋ ಇನ್ನು ಯಾರ ಮನೆಯಲ್ಲೋ ಇದ್ದುಕೊಂಡು ನಮ್ಮ ಪಾಲಿನ ಅನ್ನವನ್ನು ತಿನ್ನುವುದಕ್ಕೆ ನಮಗೆ ಅಧಿಕಾರ ಹೇಗೆ ಬಂತು ಎಂಬುದನ್ನು ಯೋಚಿಸದೆ ಕುಳಿತು ಊಟಮಾಡಿಬಿಡುತ್ತೇವೆ. ಸ್ವಲ್ಪ ತ್ರಾಣ ಬಂದ ಒಡನೆಯೇ ಇದು ಸರಿಯಲ್ಲವೆಂಬ ಭಾವನೆ ಮನಸ್ಸಿನಲ್ಲಿ ತಾನಾಗಿ ಹುಟ್ಟುತ್ತದೆ; ಇನ್ನೊಬ್ಬರ ಮನೆಯಲ್ಲಿ ಊಟಕ್ಕೆ ಕೂಡುವುದಕ್ಕೆ ಸಂಕೋಚ ಉಂಟಾಗುತ್ತದೆ. ಸುಬ್ಬಣ್ಣನಿಗೆ ಈ ರೀತಿಯ ಯೋಚನೆ ತಂದೆ ಏನನ್ನಾದರೂ ಹೇಳುವುದಕ್ಕೆ ಮುಂಚೆಯೇ ಬಂದಿತ್ತು. ಆದರೆ ಸದ್ಯಕ್ಕೆ ಬೇರೆ ಏನನ್ನು ಮಾಡುವುದೂ ತೋಚಿರಲಿಲ್ಲ. ಅಲ್ಲದೆ ಇಷ್ಟರಲ್ಲೇ ಮಹಾರಾಜರಲ್ಲಿ ಸಂಗೀತ ಶಾಸ್ತ್ರದ ಜ್ಞಾನವನ್ನು ತೋರಿಸಿ ಸಣ್ಣ ಸಂಬಳ ಒಂದನ್ನು ಸಂಪಾದಿಸಿಯೇನೆಂದು ಅವನು ಆಸೆ ಇಟ್ಟುಕೊಂಡಿದ್ದನು. ತಾನು ಸಭೆಯಲ್ಲಿ ಹಾಡುವುದಕ್ಕೆ ಕುಳಿತಾಗ ತನ್ನ ತಂದೆಯು ನೋಡಿ ಸಂತೋಷಪಡುವುದನ್ನೂ ಮಹಾರಾಜರು ಸಂಬಳ ಗೊತ್ತುಮಾಡಿದಾಗ ಅವರು ಎಷ್ಟು ಉಬ್ಬಿಹೋಗಬಹುದೆಂಬುದನ್ನೂ ಅವನು ಒಮ್ಮೊಮ್ಮೆ ನೆನೆದು ಆನಂದಪಡುವನು. ಈ ದಿನ ನೋಡಿದ್ದರಲ್ಲಿ ಅವರಿಗೆ ತನ್ನ ವಿಷಯದಲ್ಲಿ ತೀರಾ ಬೇಸರ ಹುಟ್ಟಿದ್ದಂತೆ ಕಂಡಿತು. ತಾನು ಅಯೋಗ್ಯನೆಂದೂ ಅಪ್ರಯೋಜಕನೆಂದೂ ಇವರು ತಿಳಿದರಲ್ಲಾ ಎಂದು ಬೇರೆ ಅವನಿಗೆ ಅಸಮಾಧಾನ. ಆಮೇಲೆ ತನ್ನ ಹೆಂಡತಿ. ತಾನು ಒಬ್ಬನಾಗಿದ್ದರೆ ಎಲ್ಲಾದರೂ ತೊಲಗಿಹೋಗಬಹುದಾಗಿತ್ತು. ಇವಳು ಬೇರೆ ಕುತ್ತಿಗೆಗೆ ಸುತ್ತಿದಾಳೆ. ಇದೆಲ್ಲಿಯ ಶನಿ. ಪೂರ್ವದಲ್ಲಿ ಹೆಂಡತಿ ಎಂದರೆ ಇಷ್ಟೇಯೇ ಪ್ರೀತಿ ಇದ್ದದ್ದು ಎಂದು ನೀವು ಹೇಳಬೇಡಿ. ಈಗ ನಾವು ಪ್ರೀತಿ ಎನ್ನುವ ಪ್ರೀತಿ ಕೇವಲ ಕಾಯಿಕವಾದ ಪ್ರೀತಿ. ಪೂರ್ವದವರ ಪ್ರೀತಿಯು ಒಂದು ರೀತಿಯ ಅಶ್ರದ್ಧೆಯಲ್ಲಿ ಪ್ರಾರಂಭವಾದರೂ ಕೊನೆಗೆ ಹೆಂಡತಿ ಎಂದರೆ ಲೋಕಮಾತೆಯ ಅಂಶ ಎಂಬ ಭಕ್ತಿಯಲ್ಲಿ ಮುಗಿಯುತ್ತಿತ್ತು. ಸುಬ್ಬಣ್ಣನಿಗೂ ಹಾಗೆಯೇ ಆಯಿತು. ಆದರೆ ಆ ಚಿಕ್ಕ ವಯಸ್ಸಿನಲ್ಲಿ ಅವನಿಗೆ ಹೆಂಡತಿಯ ವಿಷಯದಲ್ಲಿ ಇದ್ದದ್ದು ಅಶ್ರದ್ಧೆಯೇ. ಏಕೆಂದರೆ, ಆ ಸಂದರ್ಭದಲ್ಲಿ ಗಂಡಹೆಂಡಿರು ಒಬ್ಬರಿಗೊಬ್ಬರು ಬಹಳ ಪ್ರೀತಿಯನ್ನು ತೋರಿಸುವಂತೆ ಇರಲಿಲ್ಲ.

ಲಲಿತಮ್ಮ ಸಾವಿತ್ರಿಯ ಅವತಾರವಾಗಿದ್ದರೂ ಸುಬ್ಬಣ್ಣನಿಗೆ ಹೆಚ್ಚು ಶುಶ್ರೂಷೆ ಮಾಡುವುದು ಸಾಧ್ಯವಾಗುತ್ತಿರಲಿಲ್ಲ. ಅವನು ಮನೆಗೆ ಹೋದರೆ ದೂರದಿಂದ ನೋಡಿ ಸಂತೋಷಪಡಬೇಕು. "ನಿನ್ನ ಗಂಡನಿಗೆ ನೀರು ಕೊಡು" ಎಂದು ಅತ್ತೆ ಹೇಳಿದರೆಯೇ ಕೊಡಬಹುದು. ಇಲ್ಲ ದಿದ್ದರೆ ಸುಮ್ಮನೆ ಇರಬೇಕು. ಒಂದು ದಿನ ತಿಳಿಯದೆ ಅವಳು ಗಂಡನಿಗೆ ತಾನೇ ನೀರು ಕೊಟ್ಟಳು. ಅತ್ತೆ ತನಗೆ ತಾನೇ "ಇದೇನಪ್ಪಾ ಕಾಲ ಹೀಗಾಗಿ ಹೋಯಿತು. ಐವತ್ತುವರುಷ ಸಂಸಾರಮಾಡಿದ ಹೆಂಗಸಿಗಿಂತ ಹೆಚ್ಚಾಗಿ ಗಂಡನಿಗೆ ನೀರು ಕೊಡುತ್ತಾಳೆ. ನಮ್ಮ ದಿನದಲ್ಲಿ ಹೀಗೆಲ್ಲಾ ಮಾಡುವುದುಂಟೇ" ಎಂದು ಬೆಳಗಿನಿಂದ ಸಂಜೆಯವರೆಗೆ ಐದಾರು ಸಲ ಹೇಳಿಬಿಟ್ಟರು. ಲಲಿತಮ್ಮ "ದೇವರೆ, ಇವರು ಇದನ್ನು ಮರೆತುಬಿಟ್ಟರೆ ಹೀಗೆ ಇನ್ನೊಂದು ಸಲ ಮಾಡುವುದಿಲ್ಲ" ಎಂದುಕೊಂಡಳು. ಆಮೇಲೆ ಅವಳು ಹಾಗೆ ಮಾಡಲಿಲ್ಲ. ಲಲಿತ ಹಾಗೆ ನೀರು ಕೊಟ್ಟ ದಿನ ತನ್ನ ತಾಯಿ ಮಾಡಿದ ಗಲಾಟೆಯು ಸುಬ್ಬಣ್ಣನಿಗೂ ಗೊತ್ತಿತ್ತು. ಅವನು ಅದಕ್ಕೆ ಏನನ್ನೂ ಹೇಳಲಿಲ್ಲ. ಅವನಿಗೆ ಆ ವಿಷಯದಲ್ಲಿ ಬಹಳ ಯೋಚನೆ ಹೋಗ ಲಿಲ್ಲ. ಅವನು ಸಂಗೀತದಲ್ಲಿ ಮುಳುಗಿದ್ದನು. ಅಲ್ಲದೆ ಇಲ್ಲಿ ಮನೆಯಲ್ಲಿ ಹೆಂಡತಿ ನೀರು ಕೊಡದಿದ್ದರೂ ಬೇರೆ ಒಂದು ಮನೆಯಲ್ಲಿ ನೀಲಾ ನೀರು ಕೊಡುತ್ತಿದ್ದಳು. ಪ್ರಾಯಶಃ ಗಂಡನಿಗೆ ಎಲ್ಲಾದರೂ ಒಂದು ಕಡೆ ಇಂತಹ ಶುಶ್ರೂಷೆ ನಡೆದರೆ ಸಾಕು; ಇನ್ನೊಂದು ಕಡೆ ಅದನ್ನು ಅವನ ಮನಸ್ಸು ಅಪೇಕ್ಷಿಸುವುದಿಲ್ಲ. ಆದ್ದರಿಂದ ಸುಬ್ಬಣ್ಣನಿಗೆ ಈ ಸಂದರ್ಭದಲ್ಲಿ ನೀಲಾಸಾನಿ ಜೀವನದ ಒಂದು ಭಾಗವಾಗಿದ್ದಳು; ಹೆಂಡತಿ ಅರ್ಧ ಅನಿಷ್ಟ ವಾದ ಭಾರವಾಗಿದ್ದಳು. ಈ ಎಲ್ಲ ಕಾರಣಗಳಿಂದ ಅತೃಪ್ತನಾಗಿ ಅವನು ಆ ದಿನವನ್ನೆಲ್ಲಾ ನೀಲಾಸಾನಿಯ ಮನೆಯಲ್ಲಿ ಕಳೆದು ರಾತ್ರಿ ಮಲಗುವುದಕ್ಕೆ ಮಾತ್ರ ಮನೆಗೆ ಬಂದನು.

ಶಾಸ್ತ್ರಿಗಳು ಅದಕ್ಕೆ ಸ್ವಲ್ಪ ಮುಂಚೆ ಮನೆಗೆ ಬಂದಿದ್ದರು. ಮುದುಕ ನಿಗೆ ಎಷ್ಟಾದರೂ ಮಗನ ಮೇಲೆ ಪ್ರೀತಿ. ಅಲ್ಲದೆ ಪ್ರಾಯದ ಮಗನನ್ನು ಅನ್ನಕ್ಕೆ ಹೊರೆ ಎಂದು ಹೇಳಿದ್ದು ತನ್ನ ತಪ್ಪು ಎಂದು ಬೇರೆ ಆ ವೇಳೆಗೆ ತೋರಿತ್ತು. ಬಂದಹಾಗೆ ಯಜಮಾನಿಯನ್ನು "ಹುಡುಗ ಬಂದನೇ"

ಎಂದು ಕೇಳಿದರು. ಆಕೆಗೆ ಹಸಿದು ಹಸಿದು ಬಹಳ ಕೋಪ ಬಂದಿತ್ತು. ಗಂಡ ಹೀಗೆ ಕೇಳುತ್ತಲೂ "ನನ್ನನ್ನೇಕೆ ಕೇಳುತ್ತೀರಿ. ಕೇಳಿ, ಆ ಲೋಪಾಮುದ್ರೇನ" ಎಂದರು. ಶಾಸ್ತ್ರಿಗಳಿಗೆ ಮಾತು ಸರಿಯಾಗಿ ತಿಳಿಯಲಿಲ್ಲ. "ಯಾರನ್ನ" ಎಂದರು. "ಅಯ್ಯೋ ನೀವೂ ಸರಿಯೆ; ಏನು ಹುಡುಗ ಹುಡುಗ ಎಂತೀರಿ. ನಿಮಗೆ ಒಂದು ಭ್ರಾಂತು. ಹೆತ್ತು ಸಾಕುವುದಕ್ಕೆ ನಾವು; ಆಳುವುದಕ್ಕೆ ಬೇರೆಯೋರು ಬರುತ್ತಾರೆ. ನೋಡಿ, ಹಡೆದ ಮುದುಕಿ ಅನ್ನ ಇಲ್ಲದೆ ಸಾಯುತ್ತಾಳಲ್ಲಾ ಎನ್ನದೆ ಹೊರಟು ಹೋಗಿದಾನೆ. ಊಟಕ್ಕೇ ಬರಲಿಲ್ಲ. ಇವಳೂ ಹಠ ಮಾಡಿದ್ದಾಳೆ. ಇವಳೇ ಅವನಿಗೆ ಹೇಳಿಕೊಟ್ಟಿರಬೇಕು. ಈಗಿನ ಹುಡುಗಿಯರೇನು ಮಾಯಾವಿನಿಯರು. ಮೋಹಿನಿಯರು. ಮುದುಕಿ ಸಾಯಲಿ ಎಂತ ಗಂಡನಿಗೆ ಊಟಮಾಡಬೇಡ ಎಂತ ಹೇಳಿಕೊಟ್ಟು ಕಳುಹಿಸಿಬಿಟ್ಟಿದಾಳೆ ನೋಡಿ" ಎಂದರು. ಮಾತಿನ ಮಳೆ ಮುಗಿದ ಮೇಲೆ ಶಾಸ್ತ್ರಿಗಳು "ಹೇಳಿ ಕೊಡುವುದೇನು ಇದನ್ನೆಲ್ಲ—ತಾನೇ ಬರುತ್ತೆ" ಎಂದರು. ಯಜಮಾನಿ "ನಿಮಗೆ ಏನು ತಿಳಿಯುತ್ತೆ? ಇವಳು ಬರುವುದಕ್ಕೆ ಮುಂಚೆ ಹೀಗೆಲ್ಲಾ ಆಯಿತೇನು? ಇವಳು ಬಂದೇ ಸಂಸಾರ ಹೀಗಾದದ್ದು" ಎಂದರು. ಯಜಮಾನಿಗೆ ಕೋಪದಲ್ಲಿ ಲಲಿತೆಯನ್ನು ತಾನು ಎಂಥಾ ಮಾತು ಹೇಳಿ ನೋಯಿಸುತಿದ್ದೇನೆ ಎಂಬುದು ತಿಳಿಯಲಿಲ್ಲ. ಇದು ಎಲ್ಲ ಕಡೆಯೂ ಇರುವ ಒಂದು ಹುಚ್ಚು. ತಾಯಿಯಾದವಳು ತನ್ನ ಮಗ ತಪ್ಪುಮಾಡಿದರೆ ಅವನು ಸ್ವತಃ ಅದನ್ನು ಮಾಡಿದನೆಂದು ನಂಬಲಾರಳು. ಯಾರೋ ಅದನ್ನು ಹೇಳಿಕೊಟ್ಟಿರಬೇಕು. ಹಾಗಾದರೆ ಯಾರು? ಯಾರು ಎಂದು ಹುಡುಕ ಬೇಕಾದದ್ದೇ ಇಲ್ಲ. ಯಕ್ಷಿಣಿ ಹತ್ತಿರವೇ ಇದಾಳೆ. ಹೀಗೆ ಮಗನ ಮೇಲೆ ಹಾಕಬೇಕಾದ ತಪ್ಪನ್ನು ಹಾಕುವುದಕ್ಕೆ ಇನ್ನೊಬ್ಬರು ಇರಲಿ ಎಂದೇ ತಾಯಿಯರು ಜಾಗ್ರತೆಯಾಗಿ ಸೊಸೆಯನ್ನು ಬರಮಾಡಿಕೊಳ್ಳುವುದು. ಇಲ್ಲಿ ಇಷ್ಟು ಮಾತಾಗುವ ವೇಳೆಗೆ ಸುಬ್ಬಣ್ಣ ಮನೆಗೆ ಬಂದ. ಶಾಸ್ತ್ರಿಗಳು ಸಂಧ್ಯಾವಂದನೆಗೆ ಮೊದಲುಮಾಡಿದ್ದರು. ತಾಯಿ ಗಲಭೆ ಮಾಡು ತ್ತಿದಾರೆ. ಲಲಿತಮ್ಮ ಒಂದು ಕಡೆ ಕುಳಿತು ಕಣ್ಣೀರು ಸುರಿಸುತ್ತಿದಾಳೆ. ಸುಬ್ಬಣ್ಣ ಬಂದು ಒಂದು ಮಾತನ್ನೂ ಆಡದೆ ಕೈಕಾಲು ತೊಳೆದುಕೊಂಡು

ಸಂಧ್ಯಾವಂದನೆ ಮಾಡುತ್ತ ಕುಳಿತನು. ಹೆಂಗಸರು ಗಲಭೆ ಮಾಡುತ್ತಿದ್ದ ಕಡೆ ಗಂಡಸರು ಸಂಧ್ಯಾವಂದನೆ ಮಾಡುವುದು ಆಗುವುದಿಲ್ಲ. ತಂದೆ ಮಕ್ಕಳಿಬ್ಬರೂ ಜಾಗ್ರತೆಯಲ್ಲಿ ಸಂಧ್ಯಾವಂದನೆ ಮುಗಿಸಿದರು. ಸುಬ್ಬಣ್ಣ ಮತ್ತೆ ಹೊರಗೆ ಹೊರಟನು. ತಂದೆ "ಊಟಮಾಡಿಕೊಂಡು ಹೋಗೋ" ಎಂದರು. ಸುಬ್ಬಣ್ಣ "ನನಗೆ ಹಸಿವಿಲ್ಲ" ಎಂದ. ಯಜಮಾನಿ "ಹೌದಪ್ಪ ನಿನಗೆ ಹೇಗೆ ಹಸಿದೀತು. ನಿನ್ನ ಹೆಂಡತಿ ಬಂದಾಗ ನಿನಗೆ ಅವರಪ್ಪನ ಮನೆಯಿಂದ ಅಮೃತ ತಂದುಕೊಟ್ಟಳು. ಅವಳಿಗೂ ಹಸಿವಿಲ್ಲ; ನಿನಗೂ ಹಸಿವಿಲ್ಲ. ನಿಮ್ಮ ತಂದೆಗೆ ನನಗೇ ಹೊಟ್ಟೇಲಿ ಭೂತ ಹೊಕ್ಕಿರುವುದು" ಎಂದರು. ತಂದೆ "ಯಾಕೆ ಸುಮ್ಮನೇ ಮಾತನಾಡುತೀ" ಎಂದು, ಮಗನಿಗೆ "ಅಪ್ಪಾ ಏನೋ ಒಂದು ಮಾತು ಹೇಳಿದರೆ ನೀನೂ ಊಟ ಮಾಡದೆ ನಿನ್ನ ಹೆಂಡತೀನೂ ಊಟಮಾಡದೆ ಇದ್ದುಬಿಟ್ಟರೆ ಹೇಗೋ, ಬಾಪ್ಪ—ಕೋಪಾ ಬೇಡ" ಎಂದರು. ಯಜಮಾನಿ, "ಬಾರೇ ಎಂದೆ; ನೀನು ಊಟ ಮಾಡು, ನಾನು ಊಟ ಮಾಡುತ್ತೇನೆ ಎಂದು ಬೇಡಿಕೊಂಡೆ; ಕಾಲಿಗೆ ಬಂದು ಬೀಳಲಿಲ್ಲ. ಇನ್ನೆಷ್ಟು ಕೇಳಿಕೊಂಡರೂ ಅವಳು ಒಪ್ಪುವಳೇ? ಇನ್ನವರು ಊಟಮಾಡದಮೇಲೆ ನನಗೇಕೆ ಊಟ" ಎಂದರು. ತಾಯಿ ಊಟ ಮಾಡಲಿಲ್ಲವೆಂದು ಸುಬ್ಬಣ್ಣನಿಗೆ ಆಗ ತಿಳಿಯಿತು. ತನ್ನ ಹೆಂಡತಿ ಊಟಮಾಡದ್ದರಿಂದ ಆಕೆ ಊಟ ಮಾಡಲಿಲ್ಲವೆಂದೂ ಹೊಳೆಯಿತು. ಅವನಿಗೆ ಹೆಂಡತಿಯ ಮೇಲೆ ಬಹಳ ಕೋಪ ಬಂದಿತು. ಬೆಳಗ್ಗಿನಿಂದ ಹೊಟ್ಟೆಯಲ್ಲಿ ತುಂಬಿ ಬೆಳೆದ ಕೋಪ ಮೇಲೆ ಹರಿಯಿತು. ಅವನು ಲಲಿತಾ ಇದ್ದ ಕಡೆಗೆ ಸರ್ರನೆ ಹೋಗಿ "ನೀನು ಯಾಕೆ ಊಟ ಮಾಡಲಿಲ್ಲ; ಏನು ತಲೆಯೆಲ್ಲಾ ಹರಟೆ" ಎಂದು ಅವಳ ಕೆನ್ನೆಯ ಮೇಲೆ ಛಳೀರ್ ಛಳೀರ್ ಎಂದು ಎರಡು ಏಟು ಹೊಡೆದನು.

ಇದನ್ನು ಬರೆಯಬೇಕಾದರೆ ನನಗೆ ಕಣ್ಣಲ್ಲಿ ನೀರು ಬರುವಹಾಗಾಗಿದೆ. ಲಲಿತೆ ಕೊನೆಗೆ ಬಹಳ ಸುಖವನ್ನು ನೋಡಿದಳು. ಅವಳನ್ನು ಸುಬ್ಬಣ್ಣನು ಕೊನೆಗೆ ದೇವಿಯ ಅವತಾರವೆಂದೇ ಭಾವಿಸುವುದನ್ನು ಕಲಿತನು. ಆದರೆ ಆ ದಿನದ ಪಾಡನ್ನು ನೆನೆದರೆ ಯಾರಿಗೂ ವ್ಯಥೆಯಾಗುವುದು. ಅವಳು ಮಾಡಿದ ತಪ್ಪು ಏನು? ಗಂಡ ಊಟಮಾಡದೆಯಿದ್ದ ಕಾರಣ ತಾನೂ

ಊಟ ಮಾಡದೆ ಇದ್ದದ್ದು. ಸುಬ್ಬಣ್ಣನು ಊಟ ಮಾಡದೆ ಹೊರಟು ಹೋದದ್ದು ಕೋಪದಿಂದ. ಅವಳು ಊಟ ಮಾಡದೆ ಇದ್ದದ್ದು ಅವನು ಊಟ ಮಾಡದ್ದರಿಂದ. ಅವಳಿಗೆ ನಿಜವಾಗಿಯೂ ಇನ್ನು ಯಾವ ಅಸಮಾಧಾನವೂ ಇರಲಿಲ್ಲ. ಮಾವನು ತನ್ನ ಗಂಡನನ್ನು ಬಯ್ದನೆಂದಾಗಲೀ ತನ್ನನ್ನು ಭಾರವೆಂದು ಎಣಿಸಿದನೆಂದಾಗಲೀ ಅವಳು ಮನಸ್ಸಿಗೆ ಹಚ್ಚಿಕೊಂಡು ಇರಲಿಲ್ಲ. ತಂದೆಮಕ್ಕಳ ಮಾತು ನೂರು ಇರುತ್ತದೆ, ನನಗೇನು ಎಂದು ಇಂಥ ಸಂದರ್ಭಗಳಲ್ಲಿ ತನಗೆ ತಾನೇ ಎಂದುಕೊಳ್ಳುವಳು. ತಾಯಿ ಮಗನ ವಿಷಯದಲ್ಲಿ ಅಸಮಾಧಾನದ ಮಾತನಾಡಿದರೆ ಆಗಲೂ ಹೆತ್ತವರು ಸಾಕಿದವರು ಅವರೆನ್ನದೆ ಇನ್ನು ಯಾರು ಎನ್ನುತ್ತಾರೆ ಎಂದುಕೊಳ್ಳುವಳು. ತಾನು ಏನಾದರೂ ತಪ್ಪುಮಾಡಿದಾಗ ಅತ್ತೆ ತನ್ನನ್ನು ಏನಾದರೂ ಹೇಳಿದರೆ, "ನ್ಯಾಯ, ಮಗನೇನೋ ಅವರು ಹೆತ್ತು ಸಾಕಿದವರು. ನಾನವರಿಗೆ ಏನಾಗಬೇಕು" ಎಂದು ಸ್ವಲ್ಪ ಖಿನ್ನಳಾಗಿ "ಇನ್ನುಮೇಲೆ ಹೀಗೆ ಮಾಡುವುದಿಲ್ಲ. ಅತ್ತೆಮ್ಮನವರ ಇಷ್ಟದಂತೆ ನಡೆದುಬಿಡುವುದು" ಎಂದುಕೊಳ್ಳುವಳು. ಸಂಪ್ರದಾಯವಂತರ ಮಗಳು. ಅವಳ ತಾಯಿ ಬಹಳ ಬುದ್ಧಿವಂತರು. ತಾನು ಅತ್ತೆಮಾವಂದಿರು, ಭಾವಮೈದಂದಿರು, ಓರಗಿತ್ತಿಯರೊಂದಿಗೆ ಇಪ್ಪತ್ತು ವರುಷದ ಸಂಸಾರ ಮಾಡಿ ಕಲಿತ ವಿವೇಕವನ್ನೆಲ್ಲಾ ಮಗಳಿಗೆ ಆಗಾಗ ಹೇಳಿ ಪಾಠ ಮಾಡಿಸಿದ್ದರು. ಆದ್ದರಿಂದ ಲಲಿತೆ ಹದಿನಾರು ವರುಷ ಮಾತ್ರದ ಹುಡುಗಿಯಾದರೂ ಮುವ್ವತ್ತು ವರುಷದ ತಿಳುವಳಿಕೆಯುಳ್ಳವಳಾಗಿದ್ದಳು. ಸಾಧ್ಯವಾದಷ್ಟು ಒಳ್ಳೆಯದನ್ನೇ ಮಾಡುವಳು. ಅತ್ತೆ ಮಾವಂದಿರ ವಿಷಯದಲ್ಲೂ ಇತರರ ವಿಷಯದಲ್ಲೂ ಒಳ್ಳೆಯದನ್ನೇ ಯೋಚಿಸುವಳು. ಏನೇ ಆದರೂ ಅತ್ತೆಮಾವಂದಿರಲ್ಲಿ ಭಕ್ತಿಯನ್ನು ಬಿಡಳು. ಆದರೆ ಯಾವ ವಿವೇಕದಿಂದ ಅವಳು ಇದನ್ನೆಲ್ಲಾ ಮಾಡುತ್ತಿದ್ದಳೋ ಅದೇ ವಿವೇಕವು ಅವಳಿಗೆ ಆ ದಿನ ಗಂಡನು ಹಸಿದುಕೊಂಡಿರುವಾಗ ತಾನು ಊಟ ಮಾಡಬಾರದೆಂದು ಹೇಳಿಕೊಟ್ಟಿತು. ಅವಳು ಉಪವಾಸ ಮಾಡಿದಳು; ಸರಿಯಾದ ಕೆಲಸ ಮಾಡಿದರೂ ಗಂಡನಿಂದ ಏಟು ತಿಂದಳು. ಏಟುಬಿದ್ದ ಒಂದು ಕ್ಷಣ ಸ್ತಬ್ಧಳಾಗಿ ಏನೂ ತೋರದೆ ದೇವರ ಮನೆಯ ಬಳಿಗೆ ಹೊರಟುಹೋಗಿ ತನ್ನ ತಾಯನ್ನು ನೆನೆದುಕೊಂಡು ಐದು ನಿಮಿಷ

ಚೆನ್ನಾಗಿ ಅತ್ತಳು. ಆಮೇಲೆ ಅತ್ತು ಪ್ರಯೋಜನವಿಲ್ಲವೆಂದುಕೊಂಡು ಪಾವನವರಿಗೂ ಊಟಮಾಡುವುದಾದರೆ ಗಂಡನಿಗೂ ಎಂದು ಎರಡು ಮಣೆ ಹಾಕಿ ಎಲೆಗಳನ್ನೂ ಹಾಕಿದಳು.

ಹೆಂಡತಿಯನ್ನು ಹೊಡೆದು ಸುಬ್ಬಣ್ಣನಾಗಲಿ ಸುಖಿಯಾಗಲಿಲ್ಲ. ಹೊಡೆದ ಉತ್ತರಕ್ಷಣದಲ್ಲಿಯೇ ತಾನು ಮಾಡಿದ್ದು ಹೇಡಿಯ ಕೆಲಸ ಎಂದುಕೊಂಡನು. ಇದೇಕೋ ತನ್ನ ಕೋಪ ಅನರ್ಥಪರಂಪರೆಯನ್ನು ತರುತ್ತಿದೆ ಎಂದು ತೋರಿ ಎಲ್ಲೋ ಹೋಗಬೇಕೆಂದು ಹೊರಟಿದ್ದವನು ಆ ಯೋಚನೆ ಬಿಟ್ಟು ಅಲ್ಲೇ ಕುಳಿತನು. ತಂದೆ ಸ್ತೋತ್ರವನ್ನು ಮುಗಿಸಿದ ಮೇಲೆ ಹೋಗಿ ಎಲೆಯ ಹತ್ತಿರ ನಿಂತಿದ್ದು ಅವರು ಬಂದು ಕುಳಿತಮೇಲೆ ತಾನೂ ಕುಳಿತು ಅವರ ಜೊತೆಗೆ ಊಟ ಮಾಡಿದನು. ಆಮೇಲೆ ತಂದೆಯು ಓಲೆಗರಿ ಪುಸ್ತಕವೊಂದನ್ನು ದೂಳು ಹೊಡೆಯುತ್ತಾ ಹಜಾರದಲ್ಲಿ ಕುಳಿತಿದ್ದನು. ಅಷ್ಟು ಹೊತ್ತಿಗೆ ಲಲಿತೆಯೂ ಊಟಮಾಡಿ ಅತ್ತೆಗೆ ಬಡಿಸಿ ಮನೆಯ ಕೆಲಸ ಮುಗಿಸಿಕೊಂಡು ಬಂದು ಹಜಾರಕ್ಕೆ ಸೇರಿದಹಾಗಿದ್ದ ಕೊಟಡಿಯಲ್ಲಿ ಎಂದಿನಂತೆ ಗಂಡನಿಗೆ ಹಾಸಿಗೆಯನ್ನು ಹಾಕಿ ಬಂದು ಅತ್ತೆಯೊಂದಿಗೆ ದೇವರ ಮನೆಯ ಬಳಿ ಕುಳಿತಳು. ಜಗಳವಾಡಿ ಸಾಕಾಗಿದ್ದ ದಿನವಾದ್ದರಿಂದ ಯಾರಿಗೂ ಆ ದಿನ ಬಹಳ ಹೊತ್ತು ಎಚ್ಚರಿಕೆಯಾಗಿರುವ ಇಷ್ಟವಿರಲಿಲ್ಲ. ಶಾಸ್ತ್ರಿಗಳು ಬೇಗನೆಯೇ ಹಜಾರದಲ್ಲಿ ಮಲಗಿದರು. ಯಜಮಾನಿ "ಹೋಗೇ ಮಲಗಿಕೋ ಹೋಗು ದಿನಾ ದಿನಾ ನಾನು ಹೇಳಬೇಕೇ" ಎಂದು ಹೇಳಿದರು. ಲಲಿತಮ್ಮ ಮಲಗುವ ಮನೆಗೆ ಹೋದಳು.

ನನಗೆ ಯೋಗ್ಯತೆ ಇದ್ದರೆ ಇಲ್ಲಿ ಲಲಿತಮ್ಮನನ್ನು ವರ್ಣಿಸಬೇಕು. ಅವಳ ಮನಸ್ಸಿನ ಭಾವಗಳನ್ನು ವಿವರಿಸಿ ಹೇಳಬೇಕು. ನನಗೆ ಆ ಯೋಗ್ಯತೆ ಇಲ್ಲ. ಅಲ್ಲದೆ ಲಲಿತಮ್ಮನ ಆಕಾರ ಹೇಗಿತ್ತೆಂದು ನಾನು ಕಾಣೆ. ಮತ್ತೆ ಯೋಚಿಸುವುದರಲ್ಲಿ ಒಂದು ಸಂದೇಹ ಬರುತ್ತದೆ. ಈ ಆಕಾರವನ್ನು ಕಾಣದ್ದರಿಂದ ನಾನೇನೂ ವ್ಯಥೆಪಡಬೇಕಾದದ್ದಿಲ್ಲ. ಕಂಡಿದ್ದರೆ ತಾನೆ ವರ್ಣಿಸುತ್ತಿದ್ದೆನೆ? ಕವಿಗಳು ಸ್ತ್ರೀ ವರ್ಣನೆಯೆಂದು ಬರೆಯುವ ವರ್ಣನವು ಪ್ರಾಯಶಃ ಮಾನವನು ಸ್ತ್ರೀಯರ ವಿಷಯದಲ್ಲಿ ತೋರಬೇಕಾದ ಮರ್ಯಾದೆ

ಯನ್ನು ಮೀರುತ್ತದೆಯೆಂದು ನನ್ನ ಭಾವನೆ. ಅಯ್ಯಾ ಕವಿ! ಯಾವುದನ್ನು ಕೇವಲ ಒಂದು ಶೃಂಗಾರದ ಆವಾಸವೆಂದು ಕಾಮುಕಾವಸ್ಥೆಯಲ್ಲಿ ನೀನು ಭ್ರಮಿಸಿ ನಿನ್ನಂಥ ಕಾಮುಕರಿಗೆ ವರ್ಣಿಸಿ ಹೇಳುವೆಯೋ ಆ ಸ್ತನಯುಗ್ಮ ವನ್ನು ಲೋಕಮಾತೆಯು ನನ್ನ ನಿನ್ನಂಥ ಸಾವಿರ ಕ್ಷುದ್ರಜೀವಿಗಳ ಪಾಲನೆಗಾಗಿ ಧರಿಸಿರುವಳು. ಇದನ್ನು ವಿಟಪುರುಷನಂತೆ ವರ್ಣಿಸುವುದಕ್ಕೆ ನಿನ್ನ ಧೃಷ್ಟತನವೆಷ್ಟಿರಬೇಕು? ನಿನ್ನ ತಾಯ ಅಂಗಾಂಗಗಳನ್ನು ಹೀಗೆ ವರ್ಣಿಸುವೆಯಾ? ನಿನ್ನ ಒಡಹುಟ್ಟಿದ ಹೆಣ್ಣುಮಕ್ಕಳ ಅಂಗಾಂಗಗಳನ್ನು ಹೀಗೆ ವರ್ಣಿಸುವೆಯಾ? ಹಾಗಾದರೆ ಕವಿಯೆಂದು ಹೆಸರಿಟ್ಟುಕೊಂಡ ಮಾತ್ರಕ್ಕೆ ಸ್ತ್ರೀಯೆಂಬ ಒಂದು ವ್ಯಕ್ತಿಯನ್ನು ಹಾಗೆ ವರ್ಣಿಸುವುದಕ್ಕೆ ಕಾರಣವೇನು? ಸ್ತ್ರೀಯು ಪ್ರೇಯಸಿ ಹೇಗೋ ಅದಕ್ಕಿಂತ ಹೆಚ್ಚಾಗಿ ಮಾತೆಯಾಗಿರುವಳು. ನೀನು ಯಾರನ್ನು ನಿನ್ನ ಪತ್ನಿಯೆಂದು ಕರೆಯು ವೆಯೋ ಅವಳು ಕೂಡ ನಿನ್ನ ಸಂಸ್ಕಾರಕ್ಕಾಗಿ ಒಂದು ಸಮಯದಲ್ಲಿ ಪತ್ನಿ ಯಂತೆ ನಡೆದುಕೊಂಡರೂ ಸದಾ ಹೃದಯದಲ್ಲಿ ನಿನ್ನನ್ನೂ ಒಂದು ಮಗು ವಂತೆ ನೋಡುವಳು. ನಾನು ಕವಿಯಲ್ಲ. ಲಲಿತಮ್ಮನನ್ನು ನೋಡಿದ್ದರೂ ಅವಳ ಮುಖ ಹೀಗಿತ್ತು, ಕಣ್ಣು ಹಾಗಿತ್ತು, ತುಟಿ ಇನ್ನು ಹೇಗಿತ್ತು ಎಂದು ವರ್ಣಿಸುವುದಕ್ಕೆ ನನ್ನ ಮನಸ್ಸು ಒಪ್ಪುತ್ತಿರಲಿಲ್ಲ. ಅವಳು ಸುಂದರಿ ಯಾಗಿಯೇ ಇದ್ದಿರಬೇಕು ಎಂದು ಮಾತ್ರ ಹೇಳುತ್ತಿದ್ದೆನು. ಅಲ್ಲದೆ ನಾವು ನಮ್ಮ ಗೃಹಿಣಿಯರಲ್ಲಿ ಮೆಚ್ಚುವುದು ಏನನ್ನು? ಕಣ್ಣು ಮೂಗು ತುಟಿಗಳನ್ನೆ? ಅಪರಿಚಿತಳಾದ ಸ್ತ್ರೀಯನ್ನು ನೋಡಿದಾಗ ಅವರ ಆಕಾರದ ವಿಷಯದಲ್ಲಿ ಮನಸ್ಸು ಸ್ವಲ್ಪ ಪ್ರವರ್ತಿಸಬಹುದು. ಮನೆಯ ಹೆಂಗಸರ ವಿಷಯದಲ್ಲಿ ಹಾಗೆ ಪ್ರವರ್ತಿಸುವುದಿಲ್ಲ. ಯಾವ ಸ್ತ್ರೀಯ ವಿಷಯದಲ್ಲೇ ಆಗಲಿ ಆಕಾರದ ಸೊಗಸು ಸ್ವಲ್ಪ ಕಾಲ ಮಾತ್ರ ಪ್ರಮುಖವಾಗಿರ ಬಹುದು. ಆಮೇಲೆ ನಮಗೆ ತೋರುವುದು ಆ ಅವರ್ಣನೀಯವಾದ ಸ್ತ್ರೀವ್ಯಕ್ತಿತ್ವ; ಸಾವಿರ ಸಂದರ್ಭದಲ್ಲಿ ನಾವು ನೋಡಿರುವ ಆ ಪ್ರೇಮ, ಆ ದಯೆ, ಆ ಕನಿಕರ; ಆ ವಿಭ್ರಮ, ಆ ಲಾಲಿತ್ಯ, ಆ ಸೌಕುಮಾರ್ಯ; ಆ ಸ್ತ್ರೀತ್ವ. ವರ್ಣಿಸುವುದಾದರೆ ಲಲಿತೆಯನ್ನು ಕುರಿತು ನಾನು ಇದನ್ನು ವರ್ಣಿಸಬೇಕು. ಆದರೆ ಇದನ್ನು ವರ್ಣಿಸುವ ಶಕ್ತಿ ನನಗೆ ಇಲ್ಲ.

ಸ್ತ್ರೀತ್ವ ಎಂದು ಹೇಳಿದ ಮಾತ್ರಕ್ಕೇ ಎಲ್ಲಾ ಹೆಂಗಸರೂ ಒಂದೇ ರೀತಿ ಎಂತಲೂ ಲಲಿತಮ್ಮನಿಗೂ ಅವಳ ಅತ್ತೆಗೂ ವ್ಯತ್ಯಾಸವಿಲ್ಲವೆಂತಲೂ ನಾನು ಹೇಳುತ್ತಿರುವೆನೆಂದು ಗ್ರಹಿಸಬಾರದು. ಲಲಿತಾ ಸ್ತ್ರೀಯರಲ್ಲಿ ಉತ್ತಮ ರೀತಿಯವಳು. ಆದರಿಂದಲೇ ಅವಳಲ್ಲಿ ದಿನ ದಿನಕ್ಕೆ ಒಳ್ಳೆಯ ಗುಣಗಳು ಬೆಳೆಯುತ್ತಿದ್ದುವು. ಆ ದಿನ ಗಂಡನು ಹೊಡೆದಾಗ ಮನಸ್ಸಿಗೆ ಭೀತಿಯೂ ನೋವೂ ಉಂಟಾದರೂ ಮಲಗುವ ಮನೆಗೆ ಹೋಗುವ ವೇಳೆಗೆ ಆ ಭೀತಿಯೂ ನೋವೂ ಮರೆಯಾಗಿ ಅವಳ ಮನಸ್ಸಿನಲ್ಲಿ ಗಂಡನ ವಿಷಯ ವಾಗಿ ತನಗೇ ತಿಳಿಯದೆ ಹೊಸದಾದ ಒಂದು ಸ್ವತ್ವಭಾವವು ಉಂಟಾಗಿತ್ತು. ಅದುವರೆಗೆ ಸುಬ್ಬಣ್ಣನು ಅವಳನ್ನು ಬಹಳ ಮಾತನಾಡಿಸಿರಲಿಲ್ಲ. ಅವನು ಹುಡುಗ, ಅವಳು ಹುಡುಗಿ. ಕಾಡುಹರಟೆ ಹೊಡೆಯುವ ಸ್ವಭಾವ ದವರಲ್ಲ. ಮಾತನಾಡಿದರೆ ರಾತ್ರಿ ಸ್ವಲ್ಪ ಹೊತ್ತು ಮಾತನಾಡಬೇಕು. ಆದರಲ್ಲೂ ಲಲಿತಮ್ಮನಿಗೆ ಒಂದು ಸಂದೇಹ ಬೇರೆ. ತನ್ನ ಅತ್ತೆ ಬಾಗಿಲ ಒಳಿ ನಿಂತು ತಾವು ಆಡುವ ಮಾತನ್ನು ಕೇಳುತ್ತಿದ್ದಾರೆ ಎಂದು ಅವಳಿಗೆ ಒಂದೆರಡು ಸಲ ತೋರಿತ್ತು. ಆದ್ದರಿಂದ ಆಡುವ ಎರಡು ಮಾತನ್ನೂ ಅವಳು ಮರ್ಯಾದೆಯಿಂದಲೇ ಆಡಿ ಮುಗಿಸುವಳು. ಸುಬ್ಬಣ್ಣನಿಗೂ ಕೂಡ ಸಂಸಾರದ ಸುಖದ ಮೇಲೆ ಮನಸ್ಸು ಅಷ್ಟಾಗಿ ಹೋಗಿರಲಿಲ್ಲ. ಅವನಿಗೆ ಸಂಗೀತದಲ್ಲಿ ಪಂಡಿತನಾಗಬೇಕೆನ್ನುವ ಯೋಚನೆಯಲ್ಲಿ ಇನ್ನು ಯಾವುದೂ ಬಹಳ ಬೇಕಾಗಿರಲಿಲ್ಲ. ಅಲ್ಲದೆ ಸ್ತ್ರೀಯಿಂದ ಯಾವ ಉಪಚಾರ ಅಥವಾ ಪ್ರೀತಿಪುರಸ್ಸರವಾದ ಸೇವೆ ಬೇಕೋ ಅದನ್ನು ಅವನು ನೀಲಾನಾನಿಯ ಮನೆಯಲ್ಲಿ ಪಡೆಯುತ್ತಿದ್ದನು. ತನ್ನ ಮನೆಯಲ್ಲಿ ಪಡೆಯುವಹಾಗಿರಲಿಲ್ಲ. ಗಂಡನನ್ನು ಕಣ್ಣಾರೆ ನೋಡುವುದಕ್ಕೇ ರಾತ್ರಿಯವರೆಗೆ ಕಾಯಬೇಕಾ ಗಿರುವಾಗ ಲಲಿತ ಅವನಿಗೆ ಕೈಕಾಲಿಗೆ ನೀರು ಕೊಟ್ಟು ಮಣೆ ಹಾಕಿ ಹತ್ತಿರ ಬಂದು ನಗು ನಗುತ್ತಾ ಮಾತನಾಡಿಸುವುದೆಲ್ಲಿ? ಆದ್ದರಿಂದ ಇದುವರೆಗೆ ಸುಬ್ಬಣ್ಣ ಲಲಿತೆಯರ ಸಂಬಂಧವು ಸೂಕ್ಷ್ಮವಾದದ್ದಾಗಿತ್ತು. ಹೀಗೆ ಅಂಟಿಯೂ ಅಂಟದ ಸಂಬಂಧವನ್ನು ನಮ್ಮಲ್ಲಿ ಇರುವೆ ಕಚ್ಚಿದ ಹಾಗೆ ಎಂತ ವರ್ಣಿಸುತ್ತಾರೆ. ಇರುವೆ ಕಚ್ಚಿದರೆ ಕಚ್ಚಿದ ಹಾಗೆ ನೋವಿಲ್ಲ, ಮುತ್ತಿಟ್ಟ ಹಾಗೆ ಸುಖವಿಲ್ಲ; ಇಂಥ ಸಂಬಂಧದಲ್ಲಿ ಹಿಡಿತವಿಲ್ಲ. ಅವರು ಅದುವರೆಗೆ

ಹೇಗೋ ಹಾಗೆ ನಾವೂ ಗಂಡಹೆಂಡಿರು ಎಂತ ಇದ್ದ ಹಾಗಾಗಿತ್ತು. ಸುಬ್ಬಣ್ಣನು ಯಾವಾಗ ಹೊಡೆದನೋ ಆಗ ಅವನು ಹೆಂಡತಿಯನ್ನು ಈ ವಸ್ತು ಏನು ಮಾಡುವುದಕ್ಕೂ ನನ್ನದು ಎಂದು ಹೇಳಿದಹಾಗಾಯಿತು. ಲಲಿತೆಗೂ ಮನಸ್ಸಿನಲ್ಲಿ ಹೀಗೆಯೇ ಭಾವನೆಯುಂಟಾಯಿತು. ಅವಳ ಚೇತನವು ತಾನಾಗಿ "ನಾವಿಬ್ಬರೂ ಒಂದು. ಅತ್ತೆ ಬೇರೆ, ಮಾವ ಬೇರೆ, ಪ್ರಪಂಚವೆಲ್ಲವೂ ಬೇರೆ; ಆದರೆ ನಾವಿಬ್ಬರೂ ಒಂದು" ಎಂಬ ನಿಲುವಿಗೆ ತಿರುಗಿತು. ಆಮೇಲೆ ಅವಳು "ಹೊಡೆದರೆ ಏನು? ಇನ್ನ್ಯಾರೂ ಅಲ್ಲವಲ್ಲ, ನನ್ನ ಗಂಡತಾನೇ" ಎಂದುಕೊಂಡಳು. ತನ್ನ ತಾಯಿ ಹೇಳಿದ್ದ ಒಂದು ಮಾತು ಜ್ಞಾಪಕಕ್ಕೆ ಬಂತು. "ಏನು ಮಾಡಿದರೂ ಪತಿ ಪರದೈವ. ಗಂಡಸರು ದೇವರನ್ನು ಹುಡುಕಿಕೊಂಡು ಹೋಗಬೇಕು; ಹೆಂಗಸಿಗೆ ದೇವರು ಸದಾ ಪ್ರತ್ಯಕ್ಷನಾಗಿದ್ದಾನೆ. ಕಷ್ಟ ಕೊಟ್ಟ ಎಂತ ದೇವರನ್ನು ಬಿಟ್ಟು ಎಲ್ಲಿಗೆ ಹೋಗೋಹಾಗಿದೇವೆ. ಹಾಗೇನೆ ಬೈದ, ಹೊಡೆದ ಎಂತ ಹೆಂಗಸು ಗಂಡನನ್ನು ಬಿಟ್ಟುಹೋಗೋಹಾಗಿಲ್ಲ." ಹೀಗೆಂದುಕೊಂಡು ಲಲಿತೆ ಸಮಾಧಾನ ತೆಗೆದುಕೊಂಡಿದ್ದಳು. ನಿದ್ದೆಹೋಗಿರುತಾರೋ ಎಚ್ಚರವಾಗಿರುತಾರೋ, ಮಾತನಾಡಿಸುತಾರೋ, ಇನ್ನೂ ಕೋಪವಾಗಿಯೇ ಇರುತಾರೋ ಎಂದು ಯೋಚಿಸುತ್ತಾ ಲಲಿತಮ್ಮ ಸದ್ದಿಲ್ಲದೆ ಒಳಗೆ ನುಳಿದು ಬಾಗಿಲನ್ನು ಮುಚ್ಚಿ ಹಾಸಿಗೆಯ ಬಳಿ ಬಂದಳು. ಸುಬ್ಬಣ್ಣ ಎಡಪಕ್ಕಕ್ಕೆ ಮಲಗಿಕೊಂಡು ಕಣ್ಣು ಮುಚ್ಚಿಕೊಂಡಿದ್ದನು. ಲಲಿತ ಅಷ್ಟು ಬೇಗ ಬಂದಾಳೆಂದು ಅವನಿಗೆ ತಿಳಿದಿರಲಿಲ್ಲ. ಎಂದಿನಂತೆ ನಾವಕಾಶವಾಗಿ ಬರುವಳೆಂದುಕೊಂಡಿದ್ದನೆಂದು ಕಾಣುತ್ತದೆ. ಮಲಗಿ ತನ್ನ ಸ್ಥಿತಿಯನ್ನು ಕುರಿತು ಯೋಚಿಸುತ್ತಾ ಹಾಗೆಯೇ ಕಣ್ಣು ಮುಚ್ಚಿಕೊಂಡಿದ್ದನು. ಅದಕ್ಕೆ ಹಿಂದೆ, ರಾತ್ರಿಯಲ್ಲಿ ಅವನಿಗೆ ನಿದ್ರೆ ಅರ್ಧ ಹತ್ತಿದಮೇಲೆ ಲಲಿತಾ ಬಂದು ಬಾಗಿಲು ಹಾಕಿ ತನಗೆ ಸರಿಯಾಗಿ ಹೊದಿಸಿ ದೀಪವನ್ನು ಆರಿಸಿ ತಾನು ಬಂದು ಬಳಿಯಲ್ಲಿ ಸದ್ದಿಲ್ಲದೆ ಮಲಗುವುದು ತಿಳಿಯುತ್ತಿತ್ತು. ಈ ದಿನ ಬಂದು ದೂರ ಮಲಗುವಳೋ ಎಂದು ಅವನಿಗೆ ಒಂದು ಸಂದೇಹ; ಬಂದಾಗ ಮಾತನಾಡಿಸುವುದೇ ಸುಮ್ಮನೆ ಇರುವುದೇ ಎಂದು ಒಂದು ಯೋಚನೆ; ಸುಲಭವಾಗಿ ಮಾತನಾಡುವಳೋ ಇಲ್ಲ ಹಠ ಮಾಡುವಳೋ

ಎಂದು ಶಂಕೆ. ಇವೆಲ್ಲವೂ ತಲೆದೋರಿ ಸುಬ್ಬಣ್ಣನು "ತಪ್ಪು ಅವಳದು ; ತಾನು ಹೊಡೆದದ್ದು ಹೆಚ್ಚು ; ಆದರೂ ಮೊದಲ ತಪ್ಪು ಅವಳದು ; ಆದರೂ ಸಮಾಧಾನಮಾಡಿ ನೋಡುವುದು" ಎಂದುಕೊಳ್ಳುತ್ತಿದ್ದನು. ಲಲಿತಾ ಎಂದಿನಂತೆ ದೀಪ ಆರಿಸಿದ್ದರೆ ಅವನಿಗೆ ಅವಳು ಬಂದದ್ದು ತಿಳಿಯುತ್ತಿತ್ತು. ಅಂದು ಅವಳು ದೀಪವನ್ನಾರಿಸದೆ ಮೆಲ್ಲಗೆ ಬಂದು ಹತ್ತಿರ ಕುಳಿತು ಕೊಂಡಳು. ಗಂಡನು ನಿದ್ದೆಯಲ್ಲಿ ಇದ್ದಾನೆಂದು ತೋರಿತು. ತನ್ನದೆಂದು ಒಂದಿದ್ದ ಹೊಸ ಆದರದಿಂದ ಅವನನ್ನು ಚೆನ್ನಾಗಿ ನೋಡಿದಳು. ಅವಳ ತಾಯಿ ಎಂದೋ ಒಂದು ಸಲ "ಗಂಡನನ್ನು ನೋಡಬೇಕಾದರೆ ದೃಷ್ಟಿ ಯಾಗುವ ಹಾಗೆ ಒಂದೇಸಮನೆ ನೋಡಬಾರದು. ಗಂಡನು ಪಾರಿಜಾತದ ಹೂವಿನಂತೆ. ನೋಡಿದರೆ ಬಾಡುತಾನೆ" ಎಂದು ಹೇಳಿದ್ದದ್ದನ್ನು ನೆನೆದುಕೊಂಡು ಅವನನ್ನು ನೋಡುವುದನ್ನು ಬಿಟ್ಟಳು. ಆದರೆ ಮನಸ್ಸು ನಿಲ್ಲಲಿಲ್ಲ. ಮತ್ತೆ ಅವನನ್ನೇ ದೃಷ್ಟಿಸಿ ನೋಡಿದಳು. ಬಹಳ ಮೆಚ್ಚಿಗೆಯಾಗಿ ಅವನನ್ನು ಮಗುವಿನಂತೆ ಕೈಯಲ್ಲಿ ಹಿಡಿದುಕೊಳ್ಳೋಣವೇ ಎಂದು ತೋರಿತು. ಆದರೆ ಇನ್ನೂ ಅಷ್ಟು ಸ್ವಾತಂತ್ರ್ಯವಿಲ್ಲ; ಅಲ್ಲದೆ ನಿದ್ದೆ ಹೋಗುತ್ತಿರುವನು. ಅದರಮೇಲೆ ಸುಮ್ಮನಾಗಿ ತನ್ನನ್ನು ಹೊಡೆದಿದ್ದ ಆ ಬಲಗೈಯನ್ನು ನೋಡಿ ಏನೋ ತೋರಿ ಮೆಲ್ಲಗೆ ಅದರ ಹತ್ತಿರಕ್ಕೆ ಮುಖವನ್ನಿಟ್ಟು ತುಟಿ ಕೈಗೆ ಸೋಕಿತೋ ಇಲ್ಲವೋ ಎನ್ನುವ ಹಾಗೆ ಒಂದು ಮುತ್ತಿಟ್ಟಳು. ಸುಬ್ಬಣ್ಣ ನಿಜವಾಗಿಯೂ ನಿದ್ದೆಯಲ್ಲಿರಲಿಲ್ಲ. ಲಲಿತಾ ಕೊಟ್ಟ ಮುತ್ತಿನಿಂದ ಕಣ್ಣು ತೆರೆದನು. ಪರ್ವತರಾಜ ಕನ್ಯೆಯ ತಪಸ್ಸಿಗೆ ಮೆಚ್ಚಿದ ಪರಶಿವನಂತೆ ಯಾವ ಮಾತನ್ನೂ ಆಡದೆ ಯಾವ ಯೋಚನೆಯನ್ನೂ ಮಾಡದೆ ಅವಳನ್ನು ಎರಡು ಕೈಗಳಿಂದಲೂ ಹಿಡಿದು ಹತ್ತಿರಕ್ಕೆ ಕರೆದುಕೊಂಡು "ಶಾನೇ ನೋವಾಯಿತೇ" ಎಂದನು.

ನನಗೆ ಇಲ್ಲಿ ಸ್ವಲ್ಪ ನಗು ಬರುತ್ತದೆ. ಪರಶಿವನೇನು? ಪರ್ವತ ರಾಜಕನ್ಯೆಯೇನು? ಕೊನೆಗೆ ಈ ನೋವಾಯಿತೇ ಎಂಬ ಮಾತೇನು? ಆದರೇನು ಮಾಡುವುದು. ಇದು ಬದುಕು. ಭಾವನೆಯನ್ನೇ ಮೀರಿದ ಪ್ರಣಯವು ಆಕಾರವನ್ನು ತಳೆಯುವುದು ಇಂತ ಮಾತುಗಳಲ್ಲಿ. ಸುಬ್ಬಣ್ಣ ನಾಟಕವನ್ನು ಬರೆಯುವುದಕ್ಕೆ ಯೋಚನೆ ಮಾಡುತ್ತಾ

ಇದ್ದಿದ್ದರೆ ಅವಸಿಗೆ ಒಳ್ಳೆಯ ರಸಪುಷ್ಟವಾದ ಮಾತುಗಳು ತೋರ ಬಹುದಾಗಿತ್ತು. ಅಲ್ಲದೆ ನಾಟಕ ಬರೆಯುವವರು ಹುಡುಗಿ ಹೀಗೆಯೇ ಮಾಡುತ್ತಾಳೆ ಎಂದು ಬಲ್ಲರು. ಅದಕ್ಕೆ ಹುಡುಗ ಹೀಗೆಯೇ ಹೇಳು ತ್ತಾನೆ ಎಂದು ಅವರು ಸರಿಯಾಗಿ ಯೋಚಿಸುವರು. ನಾವು ದಿನವೂ ಆಡುತ್ತಿರುವ ನಾಟಕದಲ್ಲಿಯಾದರೋ ಹುಡುಗಿ ಹೇಗೆ ನಡೆಯುತ್ತಾಳೆ ಎಂಬುದು ತಿಳಿಯದು. ಆದ್ದರಿಂದ ನಾವು ಏನು ಹೇಳಬೇಕು ಎನ್ನು ವುದನ್ನು ಪಾಠಮಾಡಿಕೊಳ್ಳುವುದಕ್ಕಾಗುವುದಿಲ್ಲ. ಆ ರಾತ್ರಿ ಇನ್ನವ ರಿಬ್ಬರೂ ಆಡಿದ ಮಾತನ್ನು ನಾನು ಹೇಗೆ ಹೇಳಲಿ? ಮಕ್ಕಳಂಥ ಇಬ್ಬರು ಹೊಸದಾಗಿ ತಲೆದೋರಿದ ಪ್ರಣಯದಲ್ಲಿ ಒಬ್ಬರಿಗೊಬ್ಬರು ಆಡಿಕೊಂಡ ಮಾತು ಇದೇ ಎಂದು ಯಾರು ಹೇಳಬಲ್ಲರು. ಮಾತೇನೋ ಬಹಳ ಹೊತ್ತು ಆಡಿದರು. ಏನು ಮಾತೆಂದು ಅವರಿಗೇ ತಿಳಿದಿದ್ದಿರಲಾರದು. ಆದರೆ ಒಂದು ವಿಷಯವೇನೆಂದರೆ, ಇಲ್ಲಿ ಮಾತು ಮುಖ್ಯವಲ್ಲ, ಮನಸ್ಸು ಹತ್ತಿರವಾಗಿದ್ದರೆ ಸರಿ. ಆ ದಿನ ಈ ಮಾತಿನಿಂದ ಲಲಿತಾ ಮತ್ತು ಸುಬ್ಬಣ್ಣ ಇಬ್ಬರ ಮನಸ್ಸು ಬಹುಮಟ್ಟಿಗೆ ಒಂದಾಯಿತು; ಆ ಎರಡು ಆತ್ಮಗಳೂ ಹತ್ತಿರ ಹತ್ತಿರ ಒಂದುವು; ಲಲಿತಾ ತನ್ನ ಗಂಡನಿಗೆ ಯಜ ಮಾನಿಯಾದಳು, ಗೃಹಿಣಿಯಾದಳು. ಅವರೆಗೆ ಗೃಹಿಣಿಯಾಗಿರಲಿಲ್ಲವೇ ಎಂದು ಯಾರಾದರೂ ಕೇಳಬಹುದು. ಅದಕ್ಕೆ ಇಲ್ಲವೆಂದೇ ಹೇಳಬೇಕು. ಹೆಂಗಸಿಗೆ ಗಂಡನ ಹೃದಯದಲ್ಲಿ ಎಂದು ಸ್ಥಿರವಾದ ಸ್ಥಳ ಸಿಕ್ಕುವುದೋ ಅಂದೇ ಅವಳು ಗೃಹಿಣಿಯಾಗುವುದು.

೩

ಮಾರನೆಯ ದಿನ ಸುಬ್ಬಣ್ಣನು ತಾನು ಸಂಗೀತವನ್ನು ಕಲಿಯು ತ್ತಿರುವೆನೆಂದೂ ಇಷ್ಟರಲ್ಲೇ ಏನಾದರೂ ಸ್ವಲ್ಪ ಸಂಬಳ ಸಿಕ್ಕಬಹು ದೆಂದೂ ತಂದೆಗೆ ತಿಳಿಸಿದನು. ನಾರಾಯಣಶಾಸ್ತ್ರಿಗಳು ಇದನ್ನು ಕೇಳಿ ಮನಸ್ಸಿನಲ್ಲಿ ಬಹಳ ನೊಂದುಕೊಂಡರು. ತನ್ನ ಹಿರಿಯರೆಲ್ಲಾ ಸಂಸ್ಕೃತ ದಲ್ಲಿ ಅಸಾಧ್ಯ ಪಂಡಿತರು. ತಾನೂ ಸಂಸ್ಕೃತದಲ್ಲಿ ಪಂಡಿತ. ಇಂಥಾದ್ದರಲ್ಲಿ ತನಗೆ ಆದ ಒಬ್ಬನೇ ಮಗ ಸಂಸ್ಕೃತದಲ್ಲಿ ಪಂಡಿತನಾಗದೆ ಹಾಡು

ಗಾರಿಕೆ ಮನುಷ್ಯನಾದನಲ್ಲಾ ಎಂದು ಅವರಿಗೆ ಬಹಳ ವ್ಯಥೆಯಾಯಿತು. ಸಭೆಯಲ್ಲಿ ವೈದಿಕ ಮಂಡಲಿಯಲ್ಲಿ ಕುಳಿತು ಸ್ವಸ್ತಿಯನ್ನು ಹೇಳಿ ಮಹಾರಾಜರಿಗೆ ಆಶೀರ್ವಾದ ಮಾಡುವುದು ಹೇಗೆ? ಎಲ್ಲರೆದುರಿಗೆ ಕಿಂಕರನಂತೆ ಕುಳಿತು ಹಾ ಹೂ ಎಂದು ಹಾಡುವುದು ಹೇಗೆ? ಅವರಿಗೆ ಅಂದು ಹಿಂದೆ ತಮ್ಮ ಹಿರಿಯರು ಕಟ್ಟಿದ್ದ ಒಂದು ಶಿಖರವು ಕಳಚಿಬಿದ್ದಂತೆ ತೋರಿತು. ಆದರೆ ಮಾಡುವುದೇನು? ಹೇಗಾಗಬೇಕೆಂದಿತ್ತೋ ಹಾಗೆ ಆಯಿತು ಎಂದುಕೊಂಡು ಅವರು ಮತ್ತೆ ಆ ಯೋಚನೆಯನ್ನು ಮಾಡದೆ ಮರೆತರು. ಮನೆಯ ಯಜಮಾನಿಗೂ ಬಹಳ ಕೋಪ. ತಾನು ಹೆತ್ತ ಒಬ್ಬ ಮಗ ಸೂಳೆಯಂತೆ ಸಭೆಯ ಮುಂದೆ ಕುಳಿತು ಹಾಡುವುದೇ ಎಂದು ಅವರಿಗೆ ಬಹಳ ಹೀನಾಯ. ಇದು ಸ್ವಭಾವ. ನಮಗೆಲ್ಲ ಅಧಿಕಾರ ಮಾಡುವುದರಲ್ಲಿರುವಂತೆ ಇತರರಿಗೆ ಸುಖವನ್ನುಂಟುಮಾಡುವುದರಲ್ಲಿ ಆಸೆಯಿರುವುದಿಲ್ಲ. ಅಲ್ಲದೆ ಸಾಮಾನ್ಯವಾಗಿ, ವೈಕುಂಠದಲ್ಲಿ ವಿಷ್ಣುಸಾನ್ನಿಧ್ಯದಲ್ಲಿ ದೇವರ್ಷಿಪ್ರಮುಖನಾದ ನಾರದನು ಗಾಯಕನೆಂಬುದು ಪ್ರಾಯಶಃ ಮನಸ್ಸಿಗೆ ತೋರುವುದಿಲ್ಲ. ಪಾಂಡಿತ್ಯದಿಂದ ದೇವರನ್ನು ಹೇಗೆ ಮೆಚ್ಚಿಸಬಹುದೋ ಹಾಗೆ ಗಾಯನದಿಂದಲೂ ಮೆಚ್ಚಿಸಬಹುದೆಂದು ನಾವು ಯೋಚಿಸುವುದಿಲ್ಲ. ಸಂಸ್ಕೃತ ಕಲಿತವರು ಮಹಾರಾಜರಿಗೆ ಆಶೀರ್ವಾದ ಮಾಡುತ್ತಾರೆ; ಹಾಡು ಕಲಿಯುವವಳು ಮುಖ್ಯವಾಗಿ ಸೂಳೆ; ಆದ್ದರಿಂದ ಸಂಸ್ಕೃತ ಹೆಚ್ಚು, ಹಾಡುಗಾರಿಕೆ ಕಡಿಮೆ. ನಮ್ಮೆಲ್ಲರ ತರ್ಕಶಾಸ್ತ್ರವೂ ಇಷ್ಟು ದೂರವೇ ವ್ಯಾಪಿಸುವುದು. ಯಜಮಾನಿ ಯಾವ ಕಾರಣದಿಂದಲೋ ಇದರ ಹೊಣೆಗಾರಿಕೆಯನ್ನು ಲಲಿತೆಯ ಮೇಲೆಯೇ ಹಾಕಿದರು. ಸುಬ್ಬಣ್ಣ ಸಂಗೀತ ಕಲಿತನೆಂದೊಡನೆ ಅವನು ಸೂಳೆಯ ಮನೆಗೆ ಹೋಗುತ್ತಾನೆಂದು ಅವರು ಗೊತ್ತುಮಾಡಿದರು. "ಅಯ್ಯೋ, ಈಗಿನ ಹುಡುಗೀರನ್ನ ಏನು ಹೇಳುವುದು? ಗಂಡಂದಿರನ್ನ ಸರಿಯಾಗಿಟ್ಟುಕೊಳ್ಳುವುದಕ್ಕೆ ಬರುವುದಿಲ್ಲ. ಹೆಂಗಸು ಗಂಡನನ್ನ ಸರಿಯಾಗಿ ಕಂಡರೆ ಅವನು ಇನ್ನೊಂದು ಕಡೆ ಏಕೆ ಹೋಗುತ್ತಾನೆ" ಎಂದರು. ಆ ದಿನ ಯಾರೋ ನೆರೆಮನೆಯವರು ಬಂದಾಗ ಇದನ್ನೆಲ್ಲಾ ಹೇಳಿ ನಾವು ಹೀಗಿದ್ದಿದ್ದರೆ ನಮ್ಮ ಸಂಸಾರಗಳೆಲ್ಲಾ ಏನಾಗಬೇಕಾಗಿತ್ತು ಎಂದರು. ಅವರ ಮಾತನ್ನು ಕೇಳಿದ ಯಾರಿಗಾದರೂ

ಚಿಕ್ಕಂದಿನಲ್ಲಿ ನಾರಾಯಣಶಾಸ್ತ್ರಿಗಳು ಬಹಳ ಅಯೋಗ್ಯರಾಗಿದ್ದಂತೆಯೂ ಅವರನ್ನು ಈ ಹೆಂಡತಿ ಬಹಳ ಚಮತ್ಕಾರದಿಂದ ಒಲಿಸಿಕೊಂಡು ಸರಿಮಾಡಿ ಕೊಂಡಂತೆಯೂ ತೋರಿರಬೇಕು. ನಿಜವಾಗಿಯೂ ಯಜಮಾನಿ ಹೀಗಿರದೆ ಇನ್ನು ಹೇಗೂ ಇರಲಿಲ್ಲ. ಪ್ರಾಯಶಃ ಇಷ್ಟರವುಟ್ಟಿಗೂ ಇದ್ದಿರಲಾರರು. ಅವರೂ ಕೂಡ ಯಾವ ಅರ್ಥವನ್ನಾದರೂ ಇಟ್ಟುಕೊಂಡು ಮಾತನಾಡು ತ್ತಿರಲಿಲ್ಲ. ಸೊಸೆಯನ್ನು ಏನಾದರೂ ಅನ್ನಬೇಕು, ಅದಕ್ಕೆ ಇದೇ ಮಾತು ಆದೇ ಮಾತು ಎಂತ ಏನು? ಹಿಂದಿನ ದಿನ ಸೊಸೆ ಮಾಯಾವಿನಿ ಮೋಹಿನಿ ಎಂದಾಗ್ಯೂ ಈ ದಿನ ಸೊಸೆ ಗಂಡನನ್ನು ಸರಿಯಾಗಿ ನೋಡಿಕೊಳ್ಳಲಿಲ್ಲ ಎಂದಾಗ್ಯೂ ಭಾವ ಬೇರೆಯಾಯಿತಲ್ಲ. ಇದು ಹೇಗೆ ಎಂದರೆ, ಸಂದರ್ಭ ಬೇರೆಯಾದ್ದರಿಂದ ಮಾತು ಬೇರೆ. ಅಷ್ಟೆ. ಅಂತೂ ಸುಬ್ಬಣ್ಣ ಆ ಹೊತ್ತು ತಿಳಿಸಿದ ವಿಷಯದಿಂದ ಮನೆಯಲ್ಲಿ ಬಹಳ ಅಸಂತುಷ್ಟಿಗೆ ಕಾರಣವಾಯಿತು.

ಸುಬ್ಬಣ್ಣನಿಗೂ ಈ ಸಂದರ್ಭದಲ್ಲಿ ತಾಯ ವಿಷಯದಲ್ಲಿ ಒಂದು ವಿಧವಾದ ಅಸೂಯೆ ಉಂಟಾಯಿತು. ಅವರು ಹೇಳಿದ್ದನ್ನು ಕೇಳಿ ತಾನು ಹೆಂಡತಿಯನ್ನು ಹೊಡೆದದ್ದರಿಂದ ಅವನಿಗೆ ಅವರ ಮೇಲೆ ಕೋಪ ಬಂತೋ ಏನೋ. ಇಲ್ಲ ಹೆಂಡತಿಯ ಮೇಲೆ ಹೊಸ ಕನಿಕರ ಬಂದದ್ದರಿಂದ ಅವಳನ್ನು ಅವರು ಬಯ್ಯುತ್ತಾರಲ್ಲಾ ಎಂದು ತೋರಿತೋ. ಅಂತೂ ಕಾಯಿ ಒಳ್ಳಿ ಯಿಂದ ಬೇರೆಯಾಗುವುದಕ್ಕೆ ಪ್ರಾರಂಭವಾಯಿತು. ಆ ದಿನ ತಾಯಿ ಸಂಗೀತವನ್ನು ಬಯ್ಯುತ್ತಾ ಗೊಣಗುಟ್ಟುತ್ತಿದ್ದದ್ದೂ ಗಂಡನನ್ನು ಸರಿ ಯಾಗಿ ಇಟ್ಟುಕೊಳ್ಳುವುದಕ್ಕೆ ಬರಲಿಲ್ಲವೆಂದು ಸೊಸೆಯನ್ನು ಹೇಳಿದ್ದೂ ಅವನ ಕಿವಿಗೆ ಬಿತ್ತು. ಅದರಿಂದ ಬೇರೆ ಅವನಿಗೆ ಕೋಪ. ಹೀಗೆ ಆರಂಭ ವಾದ ಅಸಮಾಧಾನವು ದಿನದಿಂದ ದಿನಕ್ಕೆ ಹೆಚ್ಚುತ್ತಾ ಬಂತು. ಇದುವರೆಗೆ ವಿಧೇಯನಾಗಿದ್ದುಕೊಂಡು ಬಡಿಸಿದ್ದನ್ನು ಊಟಮಾಡಿಕೊಂಡು ಏನೂ ಅರಿಯದ ಬಸವನ ಹಾಗೆ ಇದ್ದ ಮಗನು ಈಗ ವ್ಯತ್ಯಸ್ತನಾಗುತ್ತಿದ್ದನೆಂದು ಯಜಮಾನಿಗೆ ತಿಳಿಯಲಿಲ್ಲ. ಸೊಸೆಯನ್ನು ಮಾಟಗಾತಿ ಮಾಯಾವಿನಿ ಎಂದು ಅವರು ಸುಮ್ಮನೆ ಹೇಳುತ್ತಿದ್ದದ್ದು ಎಷ್ಟೋ ಅಷ್ಟೆ. ಮಗನನ್ನು ಅವಳು ಇನ್ನೂ ಸ್ವಾಧೀನ ಮಾಡಿಕೊಂಡಿರಲಿಲ್ಲವೆಂದು ಅವರು ಚೆನ್ನಾಗಿ ತಿಳಿದಿದ್ದರು. ಇವನು ಈಗ ಹೀಗಾಗುತ್ತಿದ್ದುದನ್ನು ತಿಳಿಯದೆ ಅವರು

ಅವನನ್ನೂ ಸೊಸೆಯನ್ನೂ ಎಂದಿನಂತೆಯೇ ಕಾಣುತ್ತಿದ್ದರು. ಇದೆಲ್ಲ ಸುಬ್ಬಣ್ಣನಿಗೆ ಹೊಸ ರೀತಿಯಲ್ಲಿ ಕಾಣುವುದಕ್ಕೆ ಆರಂಭವಾಯಿತು. ಸೊಸೆ ದೇವರ ಉಪಕರಣ ತೊಳೆಯುವುದು ಎರಡು ನಿಮಿಷ ಸಾವಕಾಶವಾದರೆ ನಾನೇ ತೊಳೆಯಬೇಕೇ ಉಪಕರಣಾ ಎಂದು ದಡಬಡನೆ ಎತ್ತಿಕೊಂಡು ಬಂದು ಯಜಮಾನಿ ಹಿತ್ತಲಲ್ಲಿ ಹಾಕಿದ್ದುದನ್ನು ಅವನು ಹಿಂದೆ ಎಷ್ಟೋ ಸಲ ನೋಡಿದ್ದನು; ಆಗ ಅವನು ಏನೂ ಎಂದುಕೊಂಡಿರಲಿಲ್ಲ. ಆ ದಿನ ಹಾಗೆಯೇ ಆಯಿತು; ಸುಬ್ಬಣ್ಣ ನೋಡಿ ಅದುವರೆಗೂ ಪಡದೇ ಇದ್ದ ಒಂದು ಅಸಹನೆಯನ್ನು ಅನುಭವ ಮಾಡಿದನು. ಹೆಂಡತಿ ಹಜಾರದಲ್ಲಿ ಕಸ ಗುಡಿಸುತ್ತಿದ್ದಳು. ಎರಡು ಕೆಲಸ ಒಂದೇ ಸಲ ಹೇಗೆ ಮಾಡಿಯಾಳು ಎಂದು ಹೇಳಬೇಕೆಂದು ಅವನಿಗೆ ತೋರಿತು. ಆದರೆ ತಡೆದುಕೊಂಡು ಸುಮ್ಮನಾದನು.

ಇಷ್ಟರಲ್ಲೇ ಮನೆಯ ಹೆಣ್ಣುಮಕ್ಕಳಲ್ಲಿ ಎರಡನೆಯವಳಾದ ಲಕ್ಷ್ಮಿ ಗರ್ಭಿಣಿಯಾಗಿ ಮನೆಗೆ ಬಂದಳು. ಮನೆಯಲ್ಲಿ ಅಸಮಾಧಾನ ಹೆಚ್ಚುವು ದಕ್ಕೆ ಅದೂ ಒಂದು ಕಾರಣವಾಯಿತು. ಯಜಮಾನಿ ಮಾತಿಗೆ ಮುಂಚೆ "ಏನು ಸುಖಕ್ಕೆ ಎಂತ ಈ ಮನೆಗೆ ಬಂದೆಯೇ ಅಮ್ಮಾ ನೀನು. ಹಾಲೇ, ಮೊಸರೇ, ಕೈತುಂಬ ಸಂಪಾದಿಸಿಹಾಕುವ ಕೂಡಹುಟ್ಟಿದವರೇ? ಏನೋ ಅವರೊಬ್ಬರು ಆದುಕೊಂಡು ತಂದುಹಾಕಬೇಕು; ಎಲ್ಲಾ ಊಟ ಮಾಡ ಬೇಕು. ನಿನಗೆ ನಾನೇನು ಉಪಚಾರ ಮಾಡಲಿ" ಎನ್ನುವರು. ಲಲಿತಾ ಮುಖ ಚಿಕ್ಕದು ಮಾಡಿಕೊಳ್ಳುವಳು. ಇದು ಸುಬ್ಬಣ್ಣನಿಗೆ ತಿಳಿಯದು. ಲಲಿತಾ ಒಂದೆರಡು ಸಲ ಗಂಡನಿಗೆ ಈ ಮಾತನ್ನು ಹೇಳೋಣವೇ ಎಂದು ಕೊಂಡಳು. ಒಡನೆ ಹೆತ್ತತಾಯಿಗೆ ಮಗನಿಗೆ ಜಗಳತರಲೇ, ನನಗೇಕೆ ಎಂದು ಸುಮ್ಮನಾದಳು. ಯಜಮಾನಿ ಎಂದಿನಂತೆಯೇ ಮೊಸರು ತೆಗೆದು ಅದರಲ್ಲಿ ಮಗಳಿಗೆ ಗಟ್ಟಿ ಮೊಸರು ತೆಗೆದಿಟ್ಟು ಉಳಿದದ್ದನ್ನು ನೀರುಹಾಕಿ ಕಡೆದು ಎಲ್ಲರಿಗೂ ಬಡಿಸುವರು. ಒಂದು ದಿನ ಶಾಸ್ತ್ರಿಗಳು ಮಜ್ಜಿಗೆ ತೀರಾ ನೀರಾಯಿತು ಎಂದರು. ಯಜಮಾನಿ ಇಷ್ಟು ಮನೇಲಿ ಎಲ್ಲರಿಗೂ ಮೊಸರು ಹಾಕಬೇಕು ಎಂದರೆ ಎಷ್ಟು ಮೊಸರು ತೆಗೆದರೆ ಆಗುತ್ತೆ ಎಂದರು. ಸುಬ್ಬಣ್ಣ ಪಕ್ಕದಲ್ಲಿ ಊಟಕ್ಕೆ ಕೂತಿದ್ದನು. ಅವನಿಗೆ ಮನಸ್ಸು ಚಿಕ್ಕದಾಯಿತು.

ಆಮೇಲೆ ಹುಡುಗಿಯರಿಬ್ಬರೂ ಊಟ ಮಾಡುತ್ತಿದ್ದಾಗ ಅವನು ಏತಕ್ಕೋ ಒಳಗೆ ಹೋದನು. ಲಲಿತ ಎಲ್ಲರಂತೆ ನೀರು ಮಜ್ಜಿಗೆಯಲ್ಲಿ ಅನ್ನ ಕಲೆಸಿಕೊಂಡಿದ್ದಳು. ಲಕ್ಷ್ಮಮ್ಮನಿಗೆ ಮೊಸರು ಬಡಿಸಿದ್ದರು. ಸುಬ್ಬಣ್ಣ ನೋಡಿ, ಈ ಮೊಸರು ಸ್ವಲ್ಪ ಅಪ್ಪನಿಗೆ ಬಡಿಸಿದ್ದರೆ ಆಗಿರಲಿಲ್ಲವೆ ಎಂದುಕೊಂಡನು. ಇವನು ಈ ಮಾತುಗಳನ್ನು ಹೇಳಿದ್ದರೆ ಯಜಮಾನಿ ಎಚ್ಚತ್ತುಕೊಳ್ಳ ಬಹುದಾಗಿತ್ತೋ ಏನೋ. ಆದರೆ ಸುಬ್ಬಣ್ಣ ಮಾತನಾಡುವ ಮನುಷ್ಯನಲ್ಲ. ನೋಡಿದ್ದನ್ನೂ ಮಾಡಿದ್ದನ್ನೂ ಮನಸ್ಸಿನಲ್ಲಿಯೇ ಇಟ್ಟುಕೊಳ್ಳುವನು. ಹೀಗೆ ಬರಬರುತ್ತಾ ಮಗನಿಗೆ ತಾಯಿ ವಿಷಯದಲ್ಲಿ ಅಸಮಾಧಾನವು ಹೆಚ್ಚಿತು. ತಾಯಿ ತನ್ನ ಹೆಂಡತಿಯನ್ನು ಸರಿಯಾಗಿ ನೋಡುತ್ತಿಲ್ಲವೆಂಬೂ, ತಾನು ತನ್ನ ಹೆಂಡತಿಗೆ ಸರಿಯಾದ ಸಂಸಾರವನ್ನು ಕಟ್ಟಿಕೊಟ್ಟಹಾಗೆ ಆಗಲಿಲ್ಲವೆಂದೂ ಅವನು ಬಹಳ ಸಲ ಎಣಿಸಿಕೊಂಡನು.

ತಪ್ಪು ಎಣಿಸಿಕೊಳ್ಳುವುದಕ್ಕೆ ಮನಸ್ಸಿದ್ದರೆ ಏನೂ ಇಲ್ಲದೆಯೇ ತಪ್ಪು ಸಿಕ್ಕುತ್ತದೆ. ಇನ್ನು ಇಂಥ ಸಂಸಾರದಲ್ಲಿ ಹೇಳಬೇಕಾದದ್ದಿಲ್ಲ. ಲಲಿತೆಯೂ ಗರ್ಭಿಣಿಯಾದಳು. ಅವಳನ್ನು ಅವರ ಮನೆಯವರು ಕರೆದುಕೊಂಡು ಹೋಗಲಿಲ್ಲ. ಅವಳು ಎಲ್ಲಕ್ಕೂ ಅತ್ತೆಯ ಕೈಗೆ ಕಾಯಬೇಕಾಯಿತು. ಅವರೂ ಅಷ್ಟೆ. ಸೊಸೆಯನ್ನು ವಿಚಾರಿಸಿಕೊಳ್ಳುವುದು ಅತ್ತೆಯತನಕ್ಕೆ ಕಡಿಮೆಯೋ ಏನೋ ಎನ್ನುವ ಹಾಗೆ ಇದ್ದುಬಿಟ್ಟರು. ಹುಡುಗಿ ಗುಡಿಸ ಲಾರದೆ ಕಸ ಗುಡಿಸುತ್ತಿದ್ದರೆ ಬೇಡ ಎಂದು ಹೇಳರು. ಮಗಳಿಗೆ ಮೊಸರು ತೆಗೆದಿಟ್ಟು ಹಾಕುತ್ತಿದ್ದ ಹಾಗೆ ಇವಳಿಗೆ ಹಾಕರು. ಇದನ್ನೆಲ್ಲಾ ಸುಬ್ಬಣ್ಣ ನೋಡಿದನು. ಇದೆಲ್ಲ ಅವನಿಗೆ ವಿಪರೀತವಾಗಿ ಕಂಡಿತು. ಸೀಮಂತ ಮುಂತಾದುವನ್ನು ಶಾಸ್ತ್ರಗಳು ಉಪಾಯವಾಗಿ ನಡೆಸಿದರು. ದಿನ ಕಳೆದು ಲಲಿತಮ್ಮ ಒಂದು ಗಂಡುಮಗುವನ್ನು ಹೆತ್ತಳು.

ಸುಬ್ಬಣ್ಣನಿಗೆ ಇದರಿಂದ ಏನೂ ಹೆಚ್ಚು ಸಂತೋಷವಾಗಲಿಲ್ಲ. ತಾನೂ ತನ್ನ ಹೆಂಡತಿಯೂ ಸಂಸಾರದಲ್ಲಿ ಭಾರವಾಗಿರುವಾಗ ಈ ಮಗು ಬೇರೆ ಒಂದು ಭಾರವಾಗಿ ಹುಟ್ಟಿತಲ್ಲಾ ಎಂದು ಅವನು ಯೋಚಿಸತೊಡಗಿ ದನು. ಅದಕ್ಕೆ ತಕ್ಕಹಾಗೆ ಆ ಸಲ ನವರಾತ್ರಿಯಲ್ಲಿ ಅವರಿವರ ಅಸೂಯೆ

ಯಿಂದ ಅವನಿಗೆ ಹಾಡುವುದಕ್ಕೆ ಅವಕಾಶವಾಗಲಿಲ್ಲ. ಅಲ್ಪಸ್ವಲ್ಪವಾದರೂ ಸಂಪಾದನೆಗೆ ದಾರಿಯಾಗಬಹುದೆಂದುಕೊಂಡಿದ್ದನು. ಅದೂ ತಪ್ಪಿ ಹೋಯಿತು. ಇಷ್ಟರಲ್ಲಿ ದೇಶದ ದುರದೃಷ್ಟದಿಂದ ಇವನಂಥ ನೂರು ಜನದ ಆಸೆಯ ಡೇರೆಗೆ ಮೂಲಸ್ತಂಭದಂತಿದ್ದ ಉದಾರಶೀಲರಾದ ಮಹಾರಾಜರು ಕಾಲಾಧೀನರಾದರು. ಹತ್ತಾರು ಕಡೆಯ ಪಕ್ಷಿಗಳಿಗೆ ಆಶ್ರಯವಾಗಿದ್ದ ಮರ ಬಿದ್ದುಹೋದರೆ ಅವು ಹತ್ತಾರು ಕಡೆಗೆ ಹೋಗುವಂತೆ ಆಸ್ಥಾನದಲ್ಲಿ ನಿಂತಿದ್ದ ಪಂಡಿತರನೇಕರು ಬೇರೆ ಆಶ್ರಯಗಳನ್ನು ಹುಡುಕಿಕೊಂಡು ಹೊರಟು ಹೋದರು. ಕೆಲವರು ಮಾತ್ರ ವಯಸ್ಸಾದವರು ಇನ್ನು ಎಲ್ಲಿಗೆ ಹೋಗುವುದು ಎಂಬ ಯೋಚನೆಯಿಂದಲೂ, ಇನ್ನು ಕೆಲವರು ತಮ್ಮ ದೊರೆಯ ಮನೆ ಎಂಬ ಪ್ರೀತಿಯಿಂದಲೂ, ಮುರಿದು ಬಿದ್ದ ಮರದ ಕೊಂಬೆಯ ಮೇಲೆಯೇ ಬಿಟ್ಟುಹೋಗಲಾರದೆ ಕುಳಿತಿರುವ ಪಕ್ಷಿಗಳಂತೆ ಹೇಗೋ ಹಾಗೆ ನಿಂತರು. ಹೀಗೆ ನಿಂತವರಲ್ಲಿ ಶಾಸ್ತ್ರಿಗಳು ಒಬ್ಬರು. ಅವರು "ಇಷ್ಟು ದಿನಸ ಉಪ್ಪು ತಿನ್ನಲಿಲ್ಲವೆ? ಯುವರಾಜರಿಗೆ ಶ್ರೇಯಃಪ್ರಾರ್ಥನೆ ಮಾಡ ಬೇಕಲ್ಲ, ಮಾಡೋಣ. ನನ್ನ ದಿನ ಕಳೆಯಿತು. ನಮ್ಮಪ್ಪನ ಮನೆ ಉಳಿಯಲಿ ಬೆಳೆಯಲಿ, ಕೊಟ್ಟದ್ದನ್ನ ತೆಕ್ಕೊಂಡು ಅವರಿಗೆ ಒಳ್ಳೇದಾಗಲಿ ಎನ್ನುತ ಕಾಲ ಕಳೆಯುತೇನೆ" ಎಂದರು. ಅರಮನೆಯವರಿಗೆ ಎಂದಿನಂತೆ ವಿಜೃಂಭಣೆಯಿಂದ ಖರ್ಚು ಮಾಡುವುದಕ್ಕೆ ಅವಕಾಶವಿರಲಿಲ್ಲವಾದರೂ ಇಂಥವರನ್ನು ಬಿಟ್ಟುಹೋಗಿ ಎನ್ನುವುದಕ್ಕೆ ಇಷ್ಟವಿಲ್ಲ. ಕೈಯಲ್ಲಾದದ್ದನ್ನು ಕೊಡುತ್ತಾ ಸಂಪ್ರದಾಯವನ್ನು ನಡೆಯಿಸುತ್ತಿದ್ದರು. ಆದರೂ ಶಾಸ್ತ್ರಿಗಳಿಗೆ ವರಮಾನ ಎಂದಿಗಿಂತ ಸ್ವಲ್ಪ ಕಡಿಮೆಯಾಯಿತು. ಇದ್ದವರಿಗೇ ಆಶ್ರಯವು ಕಡಿಮೆಯಾಯಿತೆಂದಮೇಲೆ ಹೊಸ ಸಂಬಳ ಕೊಟ್ಟು ಯಾರನ್ನೂ ಸಾಕುವಂತಿರಲಿಲ್ಲವೆಂದು ಹೇಳಬೇಕಾದದ್ದಿಲ್ಲ. ಸುಬ್ಬಣ್ಣನಿಗೆ ಅರಮನೆಯ ಸಂಬಳ ಸಿಕ್ಕುವ ಆಸೆ ತೀರಾ ತಪ್ಪಿಹೋಯಿತು.

ಸಂಸಾರದಲ್ಲಿಯಾದರೋ ಕಾರ್ಪಣ್ಯವು ದಿನೇ ದಿನೇ ಹೆಚ್ಚುತ್ತಾ ಬಂತು. ಯಜಮಾನಿಯ ಸಿಡುಕು ಹೆಚ್ಚಿತು. ಲಲಿತೆ ಹತ್ತಾರು ಸಲ ಕಣ್ಣೀರು ಹಾಕಿದಳು. ಮಗುವಿಗೆ ಬೇಕಾದ ಉಪಚಾರವಿಲ್ಲ. ಗಂಡನಿಗೆ ಚೆನ್ನಾಗಿ ಬಡಿಸಬೇಕು ಎಂದು ಅವಳಿಗೆ ಒಂದು ಆಸೆ. ಆ ಆಸೆ ಈಡೇರುವ

ಪಾರಿಯಿಲ್ಲ. ಈ ಮಧ್ಯೆ ಹೆಣ್ಣುಮಕ್ಕಳ ಮನೆಗೆ ಏನನ್ನಾದರೂ ಕಳುಹಿಸಿ ಕೊಡಬೇಕೆಂದು ಮುದುಕಿಗೆ ಒಂದು ಚಪಲ. ಎಲ್ಲರೂ ಅರಮನೆಗೆ ಕಾದಿದ್ದವರು. ಅವರ ಮನೆಗಳಲ್ಲಿಯೂ ವರಮಾನ ಕಡಿಮೆಯಾಗಿತ್ತು. ಒಂದೊಂದು ಸಲ ಅವರು ಬಂದು ಅಮ್ಮ ಸ್ವಲ್ಪ ತುಪ್ಪ ಕೊಡಮ್ಮ ನಾಳೆ ಕೊಡುತ್ತೇನೆ ಎಂದು ಕೇಳುವರು. ಮುದುಕಿ ಬಾಯಿ ನಿಲ್ಲಲಾರದೆ "ಅಯ್ಯೋ ಏನುಮಾಡಲೇಮ್ಮ, ಲಕ್ಷ್ಮಿ ತಾಂಡವವಾಡುತ್ತಿದ್ದ ಮನೇಲಿ ಈಗ ಏನೂ ಇಲ್ಲದಹಾಗಾಗಿದೆ. ಬಂದವರ ಪುಣ್ಯ. ಏನೋ ಅವರವರ ಮಕ್ಕಳನ್ನು ಅವರವರು ಸಾಕಿದರೆ ಹೇಗಾದರೂ ಮಾಡಬಹುದು. ನಿಮ್ಮಪ್ಪ ಎಷ್ಟು ಜನಾನ ಎಷ್ಟು ದಿನಾ ಎಂತ ಸಾಕಿಯಾರು" ಎನ್ನುವರು. ತುಪ್ಪವನ್ನು ಕೊಡದೆ ಬಿಡುತ್ತಿರಲಿಲ್ಲ; ಮಾತು ಮಾತ್ರ ಆಡಿಬಿಡುವರು. ಲಲಿತೆಗೆ ಈ ಒಂದೊಂದು ಮಾತೂ ಕಷ್ಟ. ಹಾಗೆಯೇ ಮುದುಕಿ ಒಂದೊಂದು ಸಲ ಮಗಳು ಬಂದಾಗ ಅವಳನ್ನು ಕೂಡಿಸಿಕೊಂಡು ಮನೆಯಲ್ಲಿ ಸೊಸೆ ಮಾಡಿದ ತಪ್ಪು ಇದ್ದದ್ದು ಇಲ್ಲದ್ದನ್ನೆಲ್ಲಾ ವರ್ಣಿಸುತ್ತಾ ಕುಳಿತುಕೊಳ್ಳುವರು. ಒಂದು ದಿನ ಹೀಗೆ ಮಾತನಾಡುತ್ತಿದ್ದಾಗ ಸುಬ್ಬಣ್ಣ ಬಂದ. ಅಕ್ಕ ಒಂದು ದೊಡ್ಡ ಬಟ್ಟಲಲ್ಲಿ ತುಪ್ಪ ಇಟ್ಟುಕೊಂಡಿದಾಳೆ. ಅಮ್ಮ ಅಕ್ಕನಿಗೆ ಸೊಸೆಯ ಗುಣಕಥನ ಮಾಡುತ್ತಿದಾಳೆ. ಸುಬ್ಬಣ್ಣ ಏನೂ ಮಾತನಾಡದೆ ಕೊಟಡಿಯೊಳಕ್ಕೆ ಹೋಗಿ ಶಾಲು ತೆಗೆದುಹಾಕಿ ಬಂದನು. ಅವನು ಸಾಮಾನ್ಯವಾಗಿ ಅಕ್ಕನನ್ನು ಮಾತನಾಡಿಸುತ್ತಿದ್ದನು. ಆ ದಿನ ಮನಸ್ಸು ಬರಲಿಲ್ಲ. ಇವರೆಲ್ಲಾ ಸೇರಿ ತನ್ನ ಹೆಂಡತಿಯನ್ನು ಬಯ್ಯುವರಲ್ಲಾ ಎಂದು ಅವನಿಗೆ ಕೋಪ. ಒಂದು ಕ್ಷಣ ಬಿಟ್ಟು ಅಕ್ಕ ಹೊರಟುಹೋದಳು. ಯಜಮಾನಿ ಸ್ವಲ್ಪ ಹೊತ್ತು ಅಲ್ಲೇ ಕುಳಿತಿದ್ದು, ಎದ್ದು ಅವಳ ಹಿಂದೆ ಅವರ ಮನೆಗೆ ಹೋದರು. ಸುಬ್ಬಣ್ಣ ಹಜಾರದಲ್ಲಿ ಕುಳಿತು ಒಂದು ಓಲೆಯ ಕರಡನ್ನು ನೋಡುತ್ತಿದ್ದನು. ಶಾಸ್ತ್ರಿಗಳು ಸಾಯಂಕಾಲ ಬಂದು ಸೊಸೆಯನ್ನು ಕರೆದು ಬಾಯಿ ಯೇಕೋ ಅರೋಚಿಕವಾಗಿದೆ, ಸ್ವಲ್ಪ ಸಂಡಿಗೆ ಕರಿ ಎಂದರು. ಲಲಿತಮ್ಮ ಅಡಿಗೆ ಮಾಡುವಾಗ ಸಂಡಿಗೆಯನ್ನು ಕರಿದಿಟ್ಟಳು. ದೀಪ ಹಚ್ಚುವ ವೇಳೆಗೆ ಯಜಮಾನಿ ಬಂದು ಸಂಡಿಗೆಯನ್ನು ನೋಡಿ, "ಇದೇನು ಗರ್ವ, ಮನೆಯಲ್ಲಿ ತುಪ್ಪ ಇಲ್ಲದೆ ಇರುವಾಗ ಸಂಡಿಗೆ ಕರಿಯದೇ ಇದ್ದರೆ ಸಿಂತು

ಹೋಯಿತೆ? ಮನೆಯ ಯಜಮಾನಿಗಿಂತ ಹೆಚ್ಚಾಗಿ ಕುಣಿಯುತ್ತೀಯಲ್ಲಾ'' ಎಂದು ಸೊಸೆಯಮೇಲೆ ರೇಗಿದರು. ಶಾಸ್ತ್ರಿಗಳು ''ನಾನೇ ಕರಿಯೆಂತ ಹೇಳಿದೆ. ಯಾಕೆ ಅವಳನ್ನು ಅನ್ನುತ್ತೀಯೆ'' ಎಂದರು. ಮುದುಕಿ ''ಸರಿ, ಇಷ್ಟು ದಿನವೂ ಗಂಡನನ್ನ ಮರುಳು ಮಾಡಿದ್ದಳು. ಈಗ ನಿಮ್ಮನ್ನೂ ಮರುಳು ಮಾಡಿದ್ದಾಳೇನೋ. ಇದಕ್ಕೇನಾಗಬೇಕು. ಸಂಸಾರ ಒಪ್ಪವಾಗಿ ನೋಡಿಕೊಳ್ಳೋರಿಗಲ್ಲವೆ ತಿಳಿಯುವುದು'' ಎಂದರು. ಈ ಹಿಂದೆ ಒಂದೆರಡು ಸಲ ಶಾಸ್ತ್ರಿಗಳು ಏನಾದರೂ ಬೇಕು ಎಂದಾಗ, ತಾಯಿ ಇಲ್ಲ ಎಂದದ್ದನ್ನು ಸುಬ್ಬಣ್ಣನು ನೋಡಿದ್ದನು. ಶಾಸ್ತ್ರಿಗಳು ಕೇಳಿದಾಗ ಇಲ್ಲವಾದರೂ ಅದೇ ದಿನ ಅಕ್ಕಂದಿರಿಗೆ ಅದು ಸಿಕ್ಕುತ್ತಿತ್ತು. ಈ ದಿನ ತಾಯಿ ಅಕ್ಕನಿಗೆ ದೊಡ್ಡ ಬಟ್ಟಲು ತುಂಬ ತುಪ್ಪ ಕೊಟ್ಟು ತಂದೆಗೆ ಒಂದೆರಡು ಸಂಡಿಗೆ ಕರಿದದ್ದಕ್ಕೆ ಅಡ್ಡಿಮಾಡುತ್ತಿರುವುದನ್ನು ನೋಡಿ ಸುಬ್ಬಣ್ಣನಿಗೆ ಕೋಪಬಂದಿತು. ಉಳಿದ ಕೋಪದ ಕಾರಣವನ್ನು ಮೊದಲೇ ಹೇಳಿದೆ. ಎಲ್ಲಾ ಸೇರಿ ಅವನಿಗೆ ತಡೆಯ ಲಾರದ ಹಾಗಾಯಿತು. ಅವನು ಅಮ್ಮನನ್ನು ''ಏನಮ್ಮ ಇದು, ಸುಮ್ಮನೆ ಮಾತು. ಅಕ್ಕನಿಗೆ ಒಂದು ಬಟ್ಟಲು ತುಪ್ಪ ಕೊಟ್ಟೆ ಮಧ್ಯಾಹ್ನ. ಈಗ ಅಪ್ಪನಿಗೆ ಎರಡು ಸಂಡಿಗೆ ಕರಿಯುವುದಕ್ಕೆ ತುಪ್ಪ ಇಲ್ಲವೆ'' ಎಂದನು. ಅವರು ''ಹೌದಪ್ಪ, ಇಷ್ಟು ದಿನ ನೀನೂ ನಿನ್ನ ಹೆಂಡತಿ ಮಾತ್ರ ಸೇರಿ ಕೊಂಡು ನನ್ನ ಪ್ರಾಣ ತೆಗೀತಿದ್ದಿರಿ. ಈಗ ಅವರ ಮನಸ್ಸನ್ನು ಕೆಡಿಸಿ. ಇರಿ ಅಪ್ಪಾ, ನೀವು ಸುಖವಾಗಿರಿ. ನಾನು ನನ್ನ ಮಗಳ ಮನೆಗೇ ಹೋಗುತ್ತೇನೆ'' ಎಂದರು. ಸುಬ್ಬಣ್ಣ ''ನಾನು ನಿನ್ನನ್ನ ಮಗಳ ಮನೆಗೆ ಹೋಗು ಎಂದೆನೆ?'' ಎಂದನು. ಅವರು ''ಇನ್ನು ಅನ್ನಬೇಕೆ ಬೇರೆ? ಒಪ್ಪವಾಗಿ ಸಂಸಾರ ಮಾಡೆ ಎಂತ ಸೊಸೆಗೆ ಹೇಳಿದರೆ ಅವಳನ್ನು ಅನುಸರಿಸಿ ಕೊಂಡು ನೀನು, ಅಮ್ಮ ಅಕ್ಕನಿಗೆ ತುಪ್ಪ ಕೊಟ್ಟಳು ಎಂತ ಚಾಡಿ ಹೇಳುತ್ತೀಯಲ್ಲಾ ಅಪ್ಪನಿಗೆ; ನಾನೇನು ಈ ಮನೇಲಿ ಇರಬೇಕೆ, ಹೋಗ ಬೇಕೇ? ಮೂವತ್ತು ವರ್ಷ ಸಂಸಾರಮಾಡಿ ಹೆಣ್ಣುಮಗು ಬಂದರೆ ಒಂದಿಷ್ಟು ತುಪ್ಪ ಕೊಡೋಕೆ ನನಗೆ ಅಧಿಕಾರವಿಲ್ಲವೇ'' ಎಂತ ಕೂಗಿದರು. ಸುಬ್ಬಣ್ಣನೂ ರೇಗಿ ಕೂಗಬೇಕು. ಲಲಿತಮ್ಮ ಅಕಡೆ ಏನೋ ಬಂದಹಾಗೆ ಬಂದು, ಹೋಗಲಿ, ಸುಮ್ಮನಿರಬಾರದೇ ಎಂದು ಮೆಲ್ಲಗೆ ಹೇಳಿದಳು. ಸುಬ್ಬಣ್ಣ

ಬಾಯಿ ಮುಚ್ಚಿಕೊಂಡನು. ಯಜಮಾನಿ ಇದನ್ನ ನೋಡಿದರು. ನೋಡಿ "ಆಹಾ, ಚೆನ್ನಾಯಿತು ಚೆನ್ನಾಯಿತು. ನನ್ನೆದುರಿಗೇ ಬಂದು ಗಂಡನಿಗೆ ಹೀಗೆ ಅನ್ನು, ಹಾಗೆ ಅನ್ನು ಎಂತ ಹೇಳಿಕೊಡುತ್ತಾಳಲ್ಲ. ಬಹಳ ಚೆನ್ನಾಯಿತು" ಎಂದರು. ಸುಬ್ಬಣ್ಣ ಇನ್ನು ಇಲ್ಲಿದ್ದರೆ ಬಹಳ ಜಗಳ ವಾಗುತ್ತೆ ಎಂತ ಎದ್ದು ಹೊರಟುಹೋದನು.

ಹೀಗೆ ಸಂಸಾರವು ಬರಬರುತ್ತಾ ಬಹಳ ಕಷ್ಟಕ್ಕೆ ಬಂದಿತು. ಸುಬ್ಬಣ್ಣ ಸಂಗೀತದಲ್ಲಿ ತಕ್ಕಮಟ್ಟಿಗೆ ಪಂಡಿತನೇ ಆದನು. ಆದರೆ ಸಂಗೀತಗಾರರಲ್ಲಿ ಕೆಲವರು ಅವನಿಗೆ ಆಗದವರು. ಅವನು ಕಛೇರಿಗಳಲ್ಲಿ ಹಾಡುವುದಕ್ಕೆ ಇನ್ನೂ ಹಿಂತೆಗೆಯುತ್ತಿದ್ದನು. ಆದದ್ದರಿಂದ ಸಂಪಾದನೆಯಿಲ್ಲ. ಇಷ್ಟರಲ್ಲೇ ಕಛೇರಿಗಳಲ್ಲಿ ಹಾಡಬೇಕೆಂದು ಮನಸ್ಸು ಮಾಡಿಕೊಂಡನು. ಸೂಳೆಯರಿಗೆ ಪಾಠ ಹೇಳುವುದಾದರೆ ಅವರು ಹಣ ಕೊಡುವುದಕ್ಕೆ ಸಿದ್ಧವಾಗಿದ್ದರು. ಆದರೆ ಅದು ನೀಚಾನ್ನ. ತಂದೆಯ ಪರಿಶುದ್ಧವಾದ ಜೀವನಕ್ಕೆ ಅವನು ಇಂಥ ಕಲುಷಿತವಾದ ಸಂಪಾದನೆಯನ್ನು ತಂದು ಸೇರಿಸಲೆ ಎಂದು ಸಮ್ಮತಿಸಲಿಲ್ಲ. ಹೀಗೆ ಇರುತ್ತಿರುವಲ್ಲಿ ಒಬ್ಬ ಅಕ್ಕನೂ ಅವಳ ಮಕ್ಕಳೂ ಮನೆಗೆ ಬಂದರು. ಸಂಸಾರ ನಡೆಯುವುದೇ ಕಷ್ಟ. ಆದರಲ್ಲಿ ಇದು ಬೇರೆ. ಸುಬ್ಬಣ್ಣನು ಕಂಡ ಹಾಗೆ ಅವರ ತಾಯಿ ತನ್ನ ಮಗಳ ಮಕ್ಕಳಿಗೆ ಹೆಚ್ಚಾಗಿ ತುಪ್ಪ ಹಾಕುವರು; ಮಗನ ಮಗನಿಗೆ ಕಡಿಮೆ ಹಾಕುವರು. ಆದರೆ ಸುಬ್ಬಣ್ಣ ಸುಮ್ಮನಿರುವನು. ಮಗಳ ಮಕ್ಕಳಿಗೆ ಮೊಸರು. ಮಗನ ಮಗನಿಗೆ ನೀರುಮಜ್ಜಿಗೆ. ಮಗನೊಡನೆ ಜಗಳವಾಡೋಣ ಎಂದಲ್ಲ, ಅವರು ಹೀಗೆ ಮಾಡುತ್ತಿದ್ದುದು. ಮೊಮ್ಮಗನ ಮೇಲೆ ಆ ಮೊಮ್ಮಕ್ಕಳ ಮೇಲೆ ಹೇಗೋ ಹಾಗೆಯೇ ಪ್ರೀತಿಯೂ ಇತ್ತು. ಆದರೆ, ಇವರು ನನ್ನನ್ನು ಬೇರೆ ಎನ್ನುತ್ತಾರಲ್ಲಾ, ಅವನನ್ನು ಇವರೇ ಸಾಕಿಕೊಳ್ಳಲಿ ಎಂದು ಅವರದು ಒಂದು ಹಠ. ತಿಳಿಯದ ಹೆಂಗಸು. ಆದರೆ ಈ ಸಮಾಧಾನವನ್ನು ಸುಬ್ಬಣ್ಣನಿಗೆ ಹೇಳುವವರಿರಲಿಲ್ಲ. ಒಂದೆರಡು ಸಲ ಲಲಿತಮ್ಮ ಗಂಡನಿಗೆ ಸಮಾಧಾನ ಹೇಳುವುದಕ್ಕೆ ನೋಡಿದಳು. ಅವನು ಅವಳ ಮೇಲೆ ಕೋಪ ಮಾಡಿದನು. ಏನು, ನಮ್ಮಮ್ಮ ಹೇಳಿದ ಹಾಗೆ ನನ್ನ ಮೇಲೆ ದೊರೆತನ ಮಾಡುವುದಕ್ಕೆ ಬರುತ್ತೀ? ಎಂದನು. ಅವಳು ಏನು ಹೇಳುವುದು? ದೇವರೇ

ಇವರಿಗೆ ಈ ಕೋಪ ಹೋಗಲಿ ಎಂದು ಪ್ರಾರ್ಥಿಸಿ ಸುಮ್ಮನಾದಳು. ತಾಯಿಯ ಮಗನ ಮನಸ್ಸು ಬಹಳ ದೂರವಾಗುತ್ತಾ ಬಂತು.

ಸಂಸಾರದ ವರಮಾನದಲ್ಲಿ, ಅತ್ತೆ ಸೊಸೆಯರು ಅರಸುಮಕ್ಕಳ ಮನೆಗಳಿಗೆ ಹಬ್ಬ ಹುಣ್ಣಿಮೆಯಲ್ಲಿ ಹೋಗಿ ತರುತ್ತಿದ್ದ ಬಾಗಿನಗಳೂ ಸೇರಿದ್ದುವು. ಸುಬ್ಬಣ್ಣನಿಗೆ ಇದು ಸರಿಹೋಗುತ್ತಿರಲಿಲ್ಲ. ಹೆಂಗಸರು ಇನ್ನೊಬ್ಬರ ಮನೆಗೆ ಹೋಗುವುದು ತಪ್ಪು ಎಂದಲ್ಲ. ಅವರು ಸಂಪಾದಿಸಿ ತಂದದ್ದನ್ನು ತಾನು ತಿನ್ನುವುದಾಗಿದೆಯಲ್ಲಾ ಎಂದು ಮಾತ್ರ ಅವನಿಗೆ ಅಸಮಾಧಾನ. ಒಂದು ಸಲ ಅವನು ಮನೆಗೆ ಬಂದಾಗ ತಾಯಿ ಬಹಳ ಕೋಪಿಸಿಕೊಂಡಿದ್ದರು. ಲಲಿತಾ ಒಂದುಕಡೆ ನಿಂತು ಅಳುತ್ತಿದ್ದಳು. ಬಂದು ಅವನು ಏನಾಯಿತು ಎಂದನು. ತಾಯಿ "ನೋಡಪ್ಪಾ, ಎಂತಾ ದಿಟ್ಟಕ್ಕೆ ಇಳಿಯಿತು. ಆ ಅರಸಿನವರ ಮನೆಗೆ ಹೋಗಿ ಬಾಗಿನ ತಾ ಎಂತ ಹೇಳಿದರೆ ಹೋಗೋದಿಲ್ಲ ಎಂತಾಳೆ. ಇವಳು ರಾಣಿ; ನಾನು ಹೋಗಿ ಬೇಡಿ ತರಬಹುದು; ಇವಳಿಗೆ ಮಾನಕ್ಕೆ ಕಡಿಮೆ" ಎಂದರು. ಆ ಅರಸಿನವರ ಮನೆಯಲ್ಲಿ ಐದಾರು ದಿನದಿಂದ ಏನೋ ಪೂಜೆ ನಡೆಯುತ್ತಿತ್ತು. ಅದಕ್ಕೆ ದಿನವೂ ಹೆಂಡತಿಯೂ ಹೋಗಿ ಬರುತ್ತಿದ್ದಳೆಂಬುದನ್ನು ಸುಬ್ಬಣ್ಣ ಬಲ್ಲನು. ಇಂದು ಯಾಕೆ ಹೋಗಲಿಲ್ಲವೋ ಅವನಿಗೆ ತಿಳಿಯಲಿಲ್ಲ. ಅವನು ಹೆಂಡತಿಯನ್ನು ಯಾಕೆ ಹೋಗಲಿಲ್ಲ ಎಂದು ಕೇಳಿದನು. ಅವಳು ಯಾಕೋ ಹೋಗಲಿಲ್ಲ ಎಂದಳು. ಆ ಹೊತ್ತಿಗೆ ಶಾಸ್ತ್ರಿಗಳು ಬಂದರು. ನಡೆದದ್ದನ್ನೆಲ್ಲಾ ಕೇಳಿ ಸೊಸೆಗೆ ನೆರವಾಗಿ, ಹೋಗದಿದ್ದರೆ ಇಲ್ಲ ಅದಕ್ಕೆ ಎಷ್ಟು ದಂಡನೆ ಎಂದರು. ಸುಬ್ಬಣ್ಣನಿಗೆ ಕೋಪ ತಡೆಯಲಿಲ್ಲ. ಹೆಂಡತಿಯನ್ನು ಇಲ್ಲಿ ಬಾ ಎಂದು ಕರೆದು ಕೊಠಡಿಯೊಳಕ್ಕೆ ಹೋದನು. ಅವನು ತನ್ನನ್ನು ಬಹಳ ಬಯ್ಯುತ್ತಾನೆ, ಹೊಡೆಯುತ್ತಾನೋ ಏನೋ ಎಂದು ಲಲಿತಾ ಬಲ್ಲಳು. ಆದರೂ ಹೋದಳು. ಅವಳಿಗೆ ಅವರ ತಾಯಿ, "ಸಾಯಲಿ ಬದುಕಲಿ ದೇವರನ್ನ ಬಿಟ್ಟು ಇಲ್ಲ. ಹೊಡೀಲಿ ಬಡೀಲಿ ಗಂಡನ್ನ ಬಿಟ್ಟು ಇಲ್ಲ." ಎಂತ ಒಂದು ಸಲ ಹೇಳಿದ್ದರು. ಕೊಠಡಿಗೆ ಹೋದಮೇಲೆ ಸುಬ್ಬಣ್ಣನು ಅವಳನ್ನು ಬಾಗಿನಕ್ಕೆ ಯಾಕೆ ಹೋಗಲಿಲ್ಲ ಎಂತ ಕೇಳಿದನು. ಅವಳು ನಾನು ಹೇಳುವು ದಿಲ್ಲವೆಂದಳು. ನೀನು ಹೇಳಲೇಬೇಕು ಎಂದು ಅವನು ಹಠಮಾಡಿದನು.

ಅವಳು ಹೇಳಲಿಲ್ಲ. ಅವನು ಅವಳನ್ನು ನೀನು ಬಹಳ ಕೆಟ್ಟ ಹೆಂಗಸು ಎಷ್ಟು ಅಹಂಕಾರ ನಿನ್ನದು ಎಂದು ಚೆನ್ನಾಗಿ ಹೊಡೆದನು. ಮಗನು ಸೊಸೆಯನ್ನು ಹೊಡೆಯುವುದನ್ನು ಕೇಳಿ ಶಾಸ್ತ್ರಿಗಳು ಯಜಮಾನಿಗೆ "ನೋಡಿದೆಯೋ ನೀನು ಮಾಡಿದ್ದು ಆ ತಿಳಿಯದ ಹುಡುಗೀನ ಹೊಡೆಯಿಸಿದೆ" ಎಂದರು. ಆಕೆ "ಹೊಡೀಲಿ ಬಿಡಿ. ಬುದ್ಧಿ ಬರಲಿ. ನಾನು ಹೋಗಿ ಬಾಗಿನ ತರ ಬಹುದಂತೆ ಇವಳು ಯಾಕೆ ಹೋಗಬಾರದು?" ಎಂದರು. "ಯಾಕೆ ಬರೋದಿಲ್ಲ ಎಂದಳು" ಎಂದು ಶಾಸ್ತ್ರಿಗಳು ಕೇಳಿದರು. ಯಜಮಾನಿಯು "ನನ್ನ ಜೊತೇಲೆ ಬರುತ್ತೇನೆಂದಳು. ಬೇಡ, ನೀನು ಆಮೇಲೆ ಹೋಗುವೆ ಯಂತೆ ನಾನು ಮೊದಲು ಹೋಗಿಬರುತ್ತೇನೆ ಎಂತ ಹೊರಟುಹೋದೆ. ಆಮೇಲೆ ಹೋಗು ಎಂತ ಹೇಳಿದರೆ ಹೋಗೋದಿಲ್ಲ ಎಂದಳು. ಮೊದಲು ಬರುತ್ತೇನೆ ಎಂದಾಗ ಬೇಡ ಎಂದೆ. ಅದಕ್ಕೆ ಹಠ" ಎಂದರು. ಶಾಸ್ತ್ರಿಗಳು ಅದಕ್ಕೆ "ಒಬ್ಬಳೇ ಹೋಗೋದು ಹೇಗೆಂದು ಸಂಕೋಚವಿರಬೇಕು" ಎಂದರು. ಆಕೆ "ನಾಲ್ಕು ದಿನ ತಾನೇ ಹೋಗುತಾ ಇರಲಿಲ್ಲವೇ, ಯಾತರ ಸಂಕೋಚ. ನಿನ್ನೇನೂ ಹೀಗೇ ಎಂದಳು; ಆಮೇಲೆ ಹೋದಳು. ಈ ಹೊತ್ತು ಹಠ ಮಾಡಿಬಿಟ್ಟಳು" ಎಂದರು. ಶಾಸ್ತ್ರಿಗಳು "ಏನೂ ತಿಳಿಯದ ಹುಡುಗಿ, ಇವನು ಸುಮ್ಮನೆ ಹೊಡಿಯುತ್ತಾನೆ" ಎಂದರು. ಯಜಮಾನಿ "ಬಿಡಿ ಬಿಡಿ, ಇದೆಲ್ಲ ವೇಷ. ಜಗಳ ಆಡಿದ ಹಾಗೆ ಆಡುತ್ತಾರೆ. ಅವನೇನು ನಿಜವಾಗಿಯೂ ಹೊಡೆಯುತ್ತಾನೆಯೋ" ಎಂದು ಮಾತನ್ನು ಮುಗಿಸಿದರು.

ಸುಬ್ಬಣ್ಣ ಹೆಂಡತಿಯನ್ನು ಹೊಡೆದದ್ದು ನಿಜವೆಂದು ಯಜಮಾನಿ ನಂಬದೇ ಇದ್ದರೂ ಲಲಿತಮ್ಮನಿಗೆ ಮಾತ್ರ ಆ ದಿನ ಬಹಳ ಪೆಟ್ಟುಬಿತ್ತು. ಅಮ್ಮನೂ ಹೆಂಡತಿಯೂ ಬಾಗಿನಕ್ಕೆ ಹೋಗದೇ ಇರುವುದೇ ಸುಬ್ಬಣ್ಣ ನಿಗೆ ಸಮ್ಮತವಾದರೂ, ಆ ದಿನ ಲಲಿತಾ ಕಾರಣವನ್ನು ಹೇಳದೆ ಹಠ ಮಾಡಿದ್ದರಿಂದ ಅವನು ಅವಳನ್ನು ಹೊಡೆದನು. ಎಷ್ಟು ಹೊಡೆದರೂ ಲಲಿತಮ್ಮ ತಾನು ಏಕೆ ಹೋಗಲಿಲ್ಲವೆಂಬ ಕಾರಣವನ್ನು ಹೇಳಲಿಲ್ಲ. ಬಹಳ ದಿನಗಳ ಮೇಲೆ ಸುಬ್ಬಣ್ಣನಿಗೆ ಹೇಳಿದಳು. ಅವಳು ಅರಸು ಮಕ್ಕಳ ಮನೆಗಳಿಗೆ ಆಗಾಗ ಹೋಗಿಬರುತ್ತಿದ್ದಳು. ಎಲ್ಲರೂ ದೊಡ್ಡಮನುಷ್ಯರು, ಸಂಪ್ರದಾಯವಂತರು; ಪಾಪಭೀರುಗಳು, ಧರ್ಮಜ್ಞರು. ಅದರಂತೆ

ಈ ಒಂದು ಮನೆಗೂ ಹೋದಳು. ಮೂರು ದಿನ ಹೋಗಿಬಂದಳು. ನಾಲ್ಕನೆಯ ದಿನ ಬಾಗಿನ ತೆಗೆದುಕೊಂಡು ಬರುತ್ತಿರಬೇಕಾದರೆ ಹಜಾರದ ಕೊಠಡಿಯ ಬಳಿ ಯಾವನೋ ನಿಂತು ಒಂದೇ ದೃಷ್ಟಿಯಿಂದ ಇವಳನ್ನು ನೋಡುತ್ತಿದ್ದನು. ಸರಿಯಾದ ಹೆಂಗಸಿಗೆ ಇಂತಹ ದೃಷ್ಟಿ ಸಿಡಿಲ ಬಡಿದಂತೆ ತೋರುತ್ತದೆ. ಅಯ್ಯೋ ಏನು ಬಂತು ಎಂದು ಅವಳು ಅವಸರವಾಗಿ ಹೊರಟು ಮನೆಗೆ ಬಂದಳು. ಮಾರನೆಯ ದಿನ ಅತ್ತೆಯ ಜೊತೆಯಲ್ಲಿಯೇ ಒರುತ್ತೇನೆಂದು ಹೇಳಿದಳು. ಆಕೆ ಬೇಡವೆಂದರು. ಆಮೇಲೆ ಲಲಿತಮ್ಮ ಅರೆಮನಸ್ಸಿನಿಂದ ಒಬ್ಬಳೇ ಹೋದಳು. ಆ ಹೊತ್ತು ದಿನವೂ ಬರುವ ಬಾಗಿಲು ಹಾಕಿತ್ತು. ಪಕ್ಕದ ಕೊಠಡಿಗಳಲ್ಲಿ ಹಾಯ್ದು ಹೋಗಬೇಕಾಗಿ ಒಂದಿತು. ಕೊನೆಯ ಕೊಠಡಿಯಲ್ಲಿ ಅದೇ ಆ ಹಿಂದಿನ ದಿನದ ಮನುಷ್ಯನು ನಿಂತು ಇವಳನ್ನು ದುರುದುರನೆ ನೋಡುತ್ತಿದ್ದನು. ಅವನು ಯಾರೆಂದು ಲಲಿತೆಗೆ ತಿಳಿಯದು. ಮಾರನೆಯ ದಿನ ಅತ್ತೆಯ ಜೊತೆಗೆ ಹೋಗುವುದಕ್ಕೆ ಆಗದೆ ಹೋಗಲು ಅವಳು ಒಬ್ಬಳೇ ಹೋಗುವುದಕ್ಕೆ ಹೆದರಿ ನಿಂತುಬಿಟ್ಟಳು. "ಇದು ಸಣ್ಣ ಮಾತು. ಇದನ್ನು ಅತ್ತೆಗಾಗಲಿ ಗಂಡನಿಗಾಗಲಿ ಹೇಗೆ ಹೇಳುವುದು? ಇಷ್ಟಕ್ಕೆ ಅವನು ಯಾವ ದುಷ್ಟನೋ ಏನೋ. ಈ ಮಾತನ್ನ ಅರಸಿನವರ ಮನೆಯಲ್ಲಿ ಹೇಳುವುದು ಬೇರೆ. ಅಲ್ಲಿ ಬೇರೆ ಪಂಚಾಯಿತಿ. ಇದೆಲ್ಲ ಯಾಕೆ? ಒಂದು ಬಾಗಿನಕ್ಕಲ್ಲವೆ? ಅದೇ ಬೇಡ. ಹಟಮಾಡು ವುದಕ್ಕೆ ಬೈಗಳು ಬೀಳುತ್ತವೆ. ಬಿದ್ದರೆ ಬೀಳಲಿ" ಎಂದು ಸುಮ್ಮನಿದ್ದಳು.

ಇದಾದ ಕೆಲವು ದಿನದ ಮೇಲೆ ಒಂದು ಸಂಜೆ ಲಲಿತಮ್ಮ ಮಗು ವನ್ನು ಹಾಸಿಗೆಯಲ್ಲಿ ಮಲಗಿಸಿ ತಟ್ಟುತ್ತ ಬಹು ಸಪ್ಪೆಯ ಮುಖವನ್ನು ಹಾಕಿಕೊಂಡು ಕುಳಿತಿದ್ದಳು. ಸುಬ್ಬಣ್ಣ ಬಂದು ಏಕೆ ಹೀಗಿದ್ದೀಯೆ ಎಂದನು. ಅವಳು ಏನೂ ಇಲ್ಲ ಎಂದಳು. ಸುಬ್ಬಣ್ಣ ಆಗ ಸುಮ್ಮನಾಗಿ ಅವಳು ರಾತ್ರಿ ಮಲಗಿಕೊಳ್ಳುವುದಕ್ಕೆ ಬಂದಾಗ ಈ ಹೊತ್ತು ಏನಾ ಯಿತು ಎಂದು ಕೇಳಿದನು. ಲಲಿತಮ್ಮ "ತಿಳಿದೇ ಇದೆ, ಅವರಿಗೆ ಮೊಸರು ಹಾಕಿದರು, ಇವನಿಗೆ ಮಜ್ಜಿಗೆ ಹಾಕಿದರು" ಎಂದಳು. ಸುಬ್ಬಣ್ಣನು ಅದಕ್ಕೆ "ತಿಳಿದೇ ಇದ್ದರೆ ನೀನೇನು ಯೋಚನೆ ಮಾಡುತ್ತಿದ್ದಿ" ಎಂದನು. ಲಲಿತೆ "ಇದೂ ಇವರ ಮೊಮ್ಮಗು ಅಲ್ಲವೆ? ಇದಕ್ಕೂ ಮೊಸರು

ಹಾಕುವ ಬುದ್ಧಿಯನ್ನು ಇವರಿಗೆ ಕೊಡು ದೇವರೆ ಎಂದುಕೊಂಡೆ'' ಎಂದಳು. ಸುಬ್ಬಣ್ಣ ''ಇದಿಷ್ಟಕ್ಕೇನೇ ಮುಖ ಅಷ್ಟು ಸಪ್ಪೆಯಾಗಿತ್ತೆ'' ಎಂದನು. ಲಲಿತಮ್ಮ ಸ್ವಲ್ಪ ವ್ಯಸನದಿಂದ ನಕ್ಕು ''ಇಲ್ಲ. ಈ ಮಗುವನ್ನು ಸಾಕುವುದೇ ನನಗೆ ಕಷ್ಟವಾಗಿರುವಾಗ ನನಗೆ ತಿರುಗಿ ಮೂರು ತಿಂಗಳಾಯಿತಲ್ಲಾ'' ಎಂದು ಯೋಚಿಸುತ್ತಿದ್ದೆ ಎಂದಳು. ಸುಬ್ಬಣ್ಣ ಸ್ವಲ್ಪ ಹೊತ್ತು ಯೋಚಿಸಿ ಅರ್ಧಗಂಟೆ ಎಲ್ಲಿಯೋ ಹೋಗಿ ಹಿಂದಕ್ಕೆ ಬಂದು ಹೆಂಡತಿಗೆ, ನಿನಗೆ ಬೇಕಾದ ಸೀರೆ ಬಟ್ಟೆ ಮಗುವಿನ ಬಟ್ಟೆ ಎಲ್ಲ ಗಂಟು ಕಟ್ಟಿಕೊ ಎಂದನು. ಲಲಿತಾ ಎಲ್ಲಿಗೆ ಹೋಗುವುದಕ್ಕೆ ಎಂದಳು. ಸುಬ್ಬಣ್ಣ ''ನನ್ನನ್ನು ಮಾತನಾಡಿಸಬೇಡ, ಹೇಳಿದ ಹಾಗೆ ಕೇಳು'' ಎಂದನು. ಗಂಡನಿಗೆ ಕೋಪ ಬಂದಿರುವುದೆಂದು ಲಲಿತಮ್ಮ ತಿಳಿದು ಕೊಂಡಳು. ಇನ್ನು ಮಾತಾಡಿ ಉಪಯೋಗವಿಲ್ಲ. ಮನೆಯೊಳಕ್ಕೆ ಹೋಗಿ ತನ್ನ ಸೀರೆಯನ್ನೂ ಮಗುವಿನ ಬಟ್ಟೆಯನ್ನೂ ಒಂದೆರಡನ್ನು ತೆಗೆದು ಕೊಂಡು ಬಂದು ಒಂದು ಸಣ್ಣ ಗಂಟು ಮಾಡಿದಳು. ಇದಾದ ಮೇಲೆ ಸುಬ್ಬಣ್ಣನೂ ತನ್ನ ಬಟ್ಟೆಗಳನ್ನು ಗಂಟು ಕಟ್ಟಿ ಇರಿಸಿ ಮಲಗಿಕೊಂಡನು. ಲಲಿತಮ್ಮ ಗಂಟನ್ನು ಒಂದು ಕಡೆಯಿಟ್ಟು ತಾನೂ ಮಲಗಿಕೊಂಡಳು. ಒಂದೆರಡು ಗಳಿಗೆಯಾದ ಮೇಲೆ ಸುಬ್ಬಣ್ಣನು ಹೆಂಡತಿಯನ್ನು ಎಬ್ಬಿಸಿದನು. ತಂದೆ ಮಲಗಿದ್ದ ಕಡೆ ಕ್ಷಣ ಹೋಗಿ ಹಿಂದಕ್ಕೆ ಬಂದು ಹೆಂಡತಿಗೆ ನಿನ್ನ ಇಷ್ಟ ದೇವತೆಯನ್ನು ನೆನೆದುಕೊ ಹೊರಡೋಣ ಎಂದನು. ಲಲಿತಮ್ಮ, ಎಲ್ಲಿಗೆ ಎಂದು ಕೇಳುವುದಕ್ಕಿಲ್ಲ, ''ಬಹಳ ದಿನವಾಗುತ್ತೆಯೆ'' ಎಂದಳು. ಸುಬ್ಬಣ್ಣ ಸುಮ್ಮನೆ ಮಾತನಾಡಬೇಡ ಎಂದು ಗದರಿಸಿ ಒಂದು ಮೂಟೆ ಯನ್ನು ತೆಗೆದುಕೊಂಡು ಮಗುವನ್ನು ಹೆಗಲಮೇಲೆ ಕೂರಿಸಿಕೊಂಡು ಬಾಗಿಲಕಡೆ ಹೊರಟನು. ಲಲಿತ ಇನ್ನೊಂದು ಮೂಟೆ ತೆಗೆದುಕೊಂಡು ಹಿಂದೆ ಹೊರಟಳು. ಬೀದಿಯ ಬಾಗಿಲು ತೆಗೆದು ಹೊರಕ್ಕೆ ಬಂದು ಅದನ್ನು ಸದ್ದಿಲ್ಲದೆ ಮುಂದಕ್ಕೆ ಎಳೆದುಕೊಂಡು ಇಬ್ಬರೂ ಶ್ರೀರಂಗಪಟ್ಟಣದ ಕಡೆಗೆ ನಡೆದರು.

೪

ಕೋಳಿ ಕೂಗುವ ಮೊದಲೇ ಅವರು ಶ್ರೀರಂಗಪಟ್ಟಣವನ್ನು ಸೇರಿ ದರು. ಅಲ್ಲಿ ಛತ್ರದ ಹೊರಗಡೆ ಜಗಲಿಯ ಮೇಲೆ ನಿಂತು ಸುಬ್ಬಣ್ಣನು

ಹೆಂಡತಿಯನ್ನು ಸ್ವಲ್ಪ ನಿದ್ದೆಹೋಗು ಎಂದನು. ತಾನೂ ಸ್ವಲ್ಪ ಹಾಗೆ ನಿದ್ದೆಹೋದನು. ಬೆಳಗಾಗ ಎಲ್ಲರಿಗೆ ಮುಂದಾಗಿಯೇ ಎದ್ದು ಅವಳನ್ನೂ ಎಬ್ಬಿಸಿ ಬಾ ಹೋಗೋಣ ಎಂದನು.

ಲಲಿತೆಗೆ ಭಯವಾಯಿತು. ರಾತ್ರಿ ಹೊರಟಾಗ ಅವಳು ಗಂಡನನ್ನು ಏನೂ ಒತ್ತಿ ಕೇಳಲಿಲ್ಲ. ಅವನಿಗೆ ಆಗ ಕೋಪವೆಂದು ಬಲ್ಲಳು. ಸ್ವಲ್ಪ ಹೊತ್ತು ಗಂಡನು ತನ್ನನ್ನು ತಾಯಿ ಮನೆಯಲ್ಲಿ ಬಿಡಲು ಚಾಮರಾಜ ನಗರದ ಕಡೆ ಕರೆದುಕೊಂಡುಹೋಗುತ್ತಿದ್ದಾನೆ ಎಂದುಕೊಂಡಳು. ಆದರೆ ಸ್ವಲ್ಪ ಹೊತ್ತಿನಲ್ಲೇ ಕೋಟೆಯ ಬಾಗಿಲು ಪೇಟೆ ಇಷ್ಟನ್ನೂ ದಾಟಿ ಹೋಗುವುದರಲ್ಲಿ ಇದು ಶ್ರೀರಂಗಪಟ್ಟಣದ ದಾರಿಯೆಂದು ತಿಳಿಯಿತು: ಸುಮ್ಮನಿದ್ದಳು. ಈಗ ಶ್ರೀರಂಗಪಟ್ಟಣವನ್ನು ಬಿಟ್ಟು ಮುಂದಕ್ಕೆ ಹೊರಡುವ ಪ್ರಸಂಗ ಬಂದಾಗ, ಎಲ್ಲಿಗೆ ಹೋಗುವುದು ಎಂದು ತಿಳಿಯದೆ ಎಷ್ಟು ದೂರ ಹೋಗುವುದು ಎಂದು ಯೋಚಿಸಿ "ನೀವು ಕೋಪಮಾಡ ಬೇಡಿ, ಅವರು ನೂರು ಹೇಳಿದರೂ ಹೆತ್ತ ತಂದೆತಾಯಿ, ಹಿಂದಕ್ಕೆ ನಡೆಯಿರಿ ಹೋಗೋಣ" ಎಂದಳು. ಸುಬ್ಬಣ್ಣ "ಹೆಂಗಸರು ಈ ಪಾರುಪತ್ಯ ಮಾಡಬಾರದು. ನಾನು ಹೋದಕಡೆ ನೀನು ಸುಮ್ಮನೆ ಬರಬೇಕು" ಎಂದನು. ಲಲಿತಮ್ಮ "ಬರಲಿಲ್ಲ ಎಂದೆನೇ ನಾನು. ನಾವೇನೋ ಹೊರಟುಹೋಗುತ್ತೇವೆ. ಅತ್ತೆ ಮಾವ ಎಷ್ಟು ಯೋಚನೆಮಾಡುತ್ತಾರೋ ಎಷ್ಟು ಭಯಪಡುತ್ತಾರೋ ಎನ್ನುವುದು ಬೇಡವೆ" ಎಂದಳು. ಸುಬ್ಬಣ್ಣ: "ನೀನು ಹೋದೆ ಎಂತ ಅಲ್ಲಿ ಅಳುವವರು ಯಾರೂ ಇಲ್ಲ, ನಾಕು, ಬಾ." ಲಲಿತಮ್ಮ "ನಾನೇ ನಿಮಗೆ ಹೇಳಿಕೊಟ್ಟು ಕರೆದುಕೊಂಡು ಹೋದೆ ಎಂದು ಕೊಂಡಾರು, ಅತ್ತೆಯವರು. ನಾವು ಅವರನ್ನ ನೋಯಿಸಬಾರದು" ಎಂದಳು. ಸುಬ್ಬಣ್ಣ "ಇನ್ನು ನಮಗೆ ಅವರಿಗೆ ಸಂಬಂಧವಿಲ್ಲ. ಅವರು ಬೇಕಾದ್ದನ್ನು ಹೇಳಿಕೊಳ್ಳಲಿ, ಬಾ" ಎಂದನು. ಲಲಿತಾ: "ಅತ್ತೆಯವರದು ಬಹಳ ಕೋಪ, ಮಾವನವರನ್ನು ನೋಡಿಕೊಳ್ಳುವವರಿಲ್ಲದಹಾಗಾಗುತ್ತದೆ. ನೀವು ಕೋಪಮಾಡಬೇಡಿ, ಬನ್ನಿ." ಸುಬ್ಬಣ್ಣ: "ನನಗೆ ಬುದ್ಧಿ ಹೇಳು ವಷ್ಟರ ಮಟ್ಟಿಗಾದೆಯಾ ನೀನು." ಲಲಿತಾ "ದೊಡ್ಡವರು ಹತ್ತಿರ ಇದ್ದಾಗ ಅವರು ಹೇಳುತ್ತಿದ್ದರು. ಈಗ ಏನಾದರೂ ಒಂದು ಮಾತು ಹೇಳ

ಬೇಕಾದರೆ ನಾನೇ ತಾನೆ.'' "ಸರಿ, ನನ್ನ ಜೊತೆಯಲ್ಲಿ ಬರುವುದಕ್ಕೆ ಇಷ್ಟ ವಿಲ್ಲದಿದ್ದರೆ ನೀನು ಹೋಗು, ನಾನು ಶೇಷನನ್ನ ಕರೆದುಕೊಂಡು ಹೋಗು ತ್ತೇನೆ.'' ಹೀಗೆಂದು ಸುಬ್ಬಣ್ಣನು ಮಗನನ್ನು ಹೆಗಲಮೇಲೆ ಕೂರಿಸಿ ಕೊಂಡು ಮೂಟೆಯನ್ನು ಹೊತ್ತುಕೊಂಡನು. ಮಾತನಾಡಿ ಪ್ರಯೋಜನ ವಿಲ್ಲವೆಂದು ಲಲಿತಾ ಇನ್ನೊಂದು ಮೂಟೆಯನ್ನು ತೆಗೆದುಕೊಂಡು ಹಿಂದೆ ಹೊರಟಳು.

ಇತ್ತ ಮನೆಯಲ್ಲಿ ಬೆಳಕು ಹರಿಯುವ ಹೊತ್ತಿಗೆ ಯಜಮಾನಿ ಎದ್ದು ಇನ್ನೂ ಸೊಸೆ ಎದ್ದ ಚಿಹ್ನೆ ಇಲ್ಲದಿರುವುದನ್ನು ನೋಡಿ, ಈ ದಿನ ಇದೊಂದು ತಪ್ಪು ಸಿಕ್ಕಿತು ಎಂಬ ಸಂತೋಷದಿಂದ ಹಜಾರವನ್ನೆಲ್ಲಾ ತಾನೇ ಕಸ ಗುಡಿಸಿ ಸೆಗಣಿ ನೀರು ಚಿಮುಕಿಸುತ್ತಾ, ಇಷ್ಟು ಹೊತ್ತಾದರೂ ಏಳದೆ ಇರುವವ ರುಂಟೆ? ಮನೆ ಹೆಣ್ಣುಮಕ್ಕಳಾದರು ಸೊಸೆಯರು, ಎಲ್ಲಾ ಚಾಕರಿಯನ್ನೂ ಮುದುಕಿ ನಾನು ಮಾಡಬೇಕು—ಎಂದು ಗೊಣಗುಟ್ಟುತ್ತಾ ಓಡಿಯಾಡು ತ್ತಿದ್ದರು. ಶಾಸ್ತ್ರಿಗಳು ಎದ್ದು ಹೆಂಡತಿಯ ಮಾತನ್ನು ಕೇಳಿ, ಅಯ್ಯೋ ಪಾಪ, ಮೈಯಲ್ಲಿ ಸರಿಯಾಗಿಲ್ಲವೋ ಏನೋ—ಎಂದು, ಸುಬ್ಬಣ್ಣ ಏಳ ಲಿಲ್ಲವೇ ಎಂದರು. ಯಜಮಾನಿ, ಬಾಗಿಲು ತೆರೆದಿತ್ತು, ಎದ್ದು ಎಲ್ಲೋ ಹೋಗಿದ್ದಾನೆ ಎಂತ ಹೇಳಿದರು. ಶಾಸ್ತ್ರಿಗಳು ಸೊಸೆ ನಮ್ಮನೆ ಮಾತು ಕೇಳುತ್ತಾಳಲ್ಲಾ ಎಂಬ ಕನಿಕರದಿಂದ, ಮಗನ ಕೊಟಡಿಯ ಬಳಿಗೆ ಹೋಗಿ "ಲಲಿತಮ್ಮ, ಲಲಿತಮ್ಮ'' ಎಂದು ಕರೆದು ಕೂಗಿದರು: ಯಾರೂ ಮಾತನಾಡಲಿಲ್ಲ. ಇನ್ನು ನಿದ್ದೆಯುಂಟೆ ಎಂದು ಬಾಗಿಲನ್ನು ಮೆಲ್ಲಗೆ ತಳ್ಳಿ ಒಳಗೆ ನೋಡಿದರು: ಅಲ್ಲಿ ಯಾರೂ ಇರಲಿಲ್ಲ. ಯಾರೂ ಇಲ್ಲದ್ದನ್ನು ಕಂಡು ಶಾಸ್ತ್ರಿಗಳು, ಎದ್ದಿದ್ದಾಳೆ, ಏಳದಹಾಗೆ ಏನು, ಎಂದು ಹೇಳಿ ಕೆರೆಗೆ ಹೊರಟುಹೋದರು.

ಅವರು ಮತ್ತೆ ಬರುವ ವೇಳೆಗೆ ಮಧ್ಯಾಹ್ನ ಆಗಿತ್ತು. ಬರುವ ವೇಳೆಗೆ ಯಜಮಾನಿ ನುಮ್ಮನೆ ಕೂಗಾಡುತ್ತಿದ್ದರು. "ನೋಡಿ, ಸೊಸೆ ಮಾಡಿರು ವುದನ್ನ. ಏನೂ ತಿಳಿಯದಹಾಗಿದ್ದು ಗಂಡನನ್ನ ಕರೆದುಕೊಂಡು ತಾಯಿಯ ಮನೆಗೆ ಹೊರಟುಹೋಗಿದ್ದಾಳೆ. ಆ ಸಲ ಬಸುರಾಗಿದ್ದಾಗ ನಾನೇನು ಸರಿಯಾಗಿ ನೋಡಿಕೊಳ್ಳಲಿಲ್ಲವೇ? ನನ್ನ ಕೆಟ್ಟವಳನ್ನಾಗಿ ಮಾಡೋದಕ್ಕೆ

ಏನು ಬೇಕೋ ಅದನ್ನೆಲ್ಲಾ ಮಾಡುತ್ತಾಳೆ'' ಎಂದರು. ಮಗನೂ ಸೊಸೆಯೂ ಮೊಮ್ಮಗನೂ ಇಲ್ಲದಿರುವುದನ್ನು ನೋಡಿ ಶಾಸ್ತ್ರಿಗಳಿಗೆ ಮನಸ್ಸು ಕ್ಷಣಮಾತ್ರ ಅಳುಕಿತು. ಆಮೇಲೆ ''ಸರಿ, ಇಲ್ಲಿ ಇದ್ದು ಬೇಸರವಾಗಿದೆ ಎಂತ ಹೇಳಿದಳೇನೋ ಹುಡುಗಿ, ಅವರ ತಾಯಿಯ ಮನೆಗೆ ಕರೆದುಕೊಂಡುಹೋಗಿದಾನೆ'' ಎಂದು ಅವರು ಸುಮ್ಮನಾದರು. ಆದರೆ ಹೇಳದಹಾಗೆ ಯಾಕೆ ಹೊರಟುಹೋದರೋ, ಅವನು ಹಾಗೇ ಹೋಗೋಣವೆಂದರೂ, ಸೊಸೆ ಹಾಗೆ ಮಾಡುವಳಲ್ಲವಲ್ಲ ಎಂದು ಯೋಚನೆ ಮಾಡಿದರು. ಅವನು ಹಠದ ಹುಡುಗ ಹೋಗುತ್ತೇವೆ ಎಂದರೆ ಇದೊಂದು ರಂಪಾಗುತ್ತೆ ಎಂತ ಯೋಚಿಸಿ ಹೀಗೆ ಮಾಡಿರಬೇಕು, ಎಂದುಕೊಂಡು ಆ ಮಾತನ್ನು ಮರೆತರು.

ಐದಾರು ದಿನ ಕಳೆದರೂ ಮಗ ಹಿಂದಕ್ಕೆ ಬರಲಿಲ್ಲ. ಶಾಸ್ತ್ರಿಗಳಿಗೆ ಅನ್ನ ಸೇರದಹಾಗಾಯಿತು. ಒಬ್ಬನೇ ಮಗ; ಇಪ್ಪತ್ತೈದು ವರುಷ ಸಾಕಿದ್ದರು. ದೊಡ್ಡವನೂ ಅವನೇ ಚಿಕ್ಕವನೂ ಅವನೇ. ವಯಸ್ಸಾದ ಹುಡುಗನಾದರೂ ಅವನು ಅವರ ಕಣ್ಣಿಗೆ ಮಗುವಿನಂತೆಯೇ ಇದ್ದನು. ಆ ಮೊಮ್ಮಗನಾದ ಹುಡುಗ ಅವರಿಗೆ ಅಚ್ಚುಮೆಚ್ಚು. ದಿನಾ ಅವರ ಜೊತೆಗೆ ಮಗನೂ ಊಟಕ್ಕೆ ಕೂಡುತ್ತಿದ್ದನು. ಈಗ ಅವನಿಲ್ಲದ್ದು ಅವರಿಗೆ ಊಟ ಬೇಡದಂತೆ ಬೇಸರವಾಗುವುದಕ್ಕೆ ಮೊದಲಾಯಿತು. ಆಗಾಗ, ಯಾಕೋ ಹುಡುಗ ಬರಲಿಲ್ಲವಲ್ಲಾ, ಎಂದುಕೊಳ್ಳುವರು. ಯಜಮಾನಿಗೂ ಮನಸ್ಸಿನಲ್ಲಿ ಭಯ ತಟ್ಟಿತು. ಇವರೆಲ್ಲಾದರೂ ಬೇರೆಯಾಗಿಬಿಟ್ಟರೆ, ಸೊಸೆಯನ್ನ ಬಾಳಿಸಲಿಲ್ಲ ಅಟ್ಟಿಬಿಟ್ಟರು ಎಂತ ಜನ ತನ್ನನ್ನು ಬಯ್ಯುವರಲ್ಲಾ ಎಂದು ಅವರಿಗೆ ಯೋಚನೆ. ಅವರು, ಸದ್ಯ ಮಗ ಹಿಂದಕ್ಕೆ ಬಂದುಬಿಟ್ಟರೆ, ಆಮೇಲೆ ಒಳ್ಳೆಯ ಮಾತೇನನ್ನಾದರೂ ಹೇಳಿ ಸೊಸೆಯನ್ನ ಕರೆಯಿಸಿಕೊಳ್ಳಬಹುದು, ಮಾನ ಉಳಿಯುತ್ತದೆ, ಎಂದುಕೊಂಡರು. ಆಮೇಲೆ ಒಂದು ದಿನ ಶಾಸ್ತ್ರಿಗಳು ಮಗ ಬರಲಿಲ್ಲವಲ್ಲಾ, ಎಂದು ಹೇಳಿದಾಗ, ''ಅದಕ್ಕೇನು ಅತ್ತೇಮನೆಗೆ ಬಹಳ ದಿನಗಳಿಂದ ಹೋಗಿರಲಿಲ್ಲ. ಈಗ ಹೋದ. ಹತ್ತು ದಿನ ಇರು ಎಂತ ಹೇಳಿರಬಹುದು. ಇದ್ದಾನೆ. ಬೇಕಾದರೆ ಹೇಳಿಕಳುಹಿಸಿ. ಜಾಗ್ರತೆ ಹಿಂದಕ್ಕೆ ಬಾ ಎಂತ'' ಎಂದರು. ಹೇಳಿಕಳುಹಿಸಲಿ ಎಂದು ಆಸೆ. ಆದರೆ ತಾನು ಬೇಡಿದಹಾಗಾಗ

ಬಾರದು ಎಂದು ಜಂಭ. ಶಾಸ್ತ್ರಿಗಳು ಒಬ್ಬ ಆಳನ್ನು ಗೊತ್ತುಮಾಡಿ ಚಾಮರಾಜನಗರದ ಹತ್ತಿರದ ಆ ಹಳ್ಳಿಗೆ ಹೇಳಿಕಳುಹಿಸಿದರು. ಆಳು ಹಿಂದಕ್ಕೆ ಬಂದಾಗ ಜೊತೆಗೆ ಲಲಿತೆಯ ಚಿಕ್ಕಪ್ಪನ ಮಗ ಬಂದ. "ಲಲಿತಮ್ಮನೂ ಅಳಿಯಂದಿರೂ ನಮ್ಮೂರಿಗೆ ಎಂತ ಹೊರಟರೆ?" ಎಂದು ಕೇಳಿದ. ಇವರು "ಹೌದು, ಹೊರಟು ಬಹಳ ದಿನವಾಯಿತಲ್ಲಾ" ಎಂದರು. ಅವನು "ಅವರು ನಮ್ಮೂರಿಗೆ ಬರಲಿಲ್ಲ. ದಾರಿಯಲ್ಲಿ ಕಳ್ಳಕಾಕರ ಕೈಗೆ ಸಿಕ್ಕಿದರೋ ಏನೋ" ಎಂದು ಹೇಳಿ ಗಾಬರಿಯಿಂದ ಯೋಚನೆಮಾಡುತ್ತ ಕುಳಿತನು.

ಶಾಸ್ತ್ರಿಗಳಿಗೆ ಎದೆ ಒಡೆಯಿತು. ಯಜಮಾನಿಯ ಕಾಟವನ್ನು ತಡೆಯಲಾರದೆ ಸೊಸೆ ಮಗನನ್ನು ಕರೆದುಕೊಂಡು ಎಲ್ಲಿಯೋ ಹೊರಟುಹೋಗಿರಬೇಕೆಂದು ಅವರು ಯೋಚಿಸಿಕೊಂಡರು. ಮಗನು ತಾನಾಗಿಯೇ ಹೊರಟು ಹೋಗಿರಬಹುದೆಂದು ಈಗ ಅವರಿಗೆ ಕೂಡ ತೋರಲಿಲ್ಲ. ಎಷ್ಟಾದರೂ ಮಗ ತನ್ನವನು. ಹೀಗೆಯೇ ಯೋಚಿಸಿಕೊಂಡು, ಇದೇಕೋ ಅನಾಹುತಕ್ಕೆ ಬಂತೆಂದು ಬೀಗರ ಹುಡುಗನನ್ನು ಕುರಿತು "ಮನೇಲಿ ಹೆಂಗಸರು ಹೆಂಗಸರಿಗೆ ಅಸಮಾಧಾನವಾಗಿತ್ತು. ಎಲ್ಲೋ ಹೋಗಿದಾರೆ. ನಿಮ್ಮೂರಿಗೆ ಹೋಗಿದ್ದಾರೆ ಎಂದುಕೊಂಡಿದ್ದೆ. ಇಲ್ಲ ಎಂದಮೇಲೆ ಇನ್ನೆಲ್ಲಿಗೆ ಹೋದರೋ ನೋಡೋಣ" ಎಂದರು. ಯಜಮಾನಿ ತಪ್ಪನ್ನು ಕೊನೆಗೂ ಸೊಸೆಯ ಮೇಲೆ ಹೊರಿಸಬೇಕು ಎಂತ "ನಮ್ಮ ಹುಡುಗಿ ಮನೆಗೆ ಬಂದದ್ದೇ, ಸೊಸೆ ಏನೋ ಒಂದು ಮಾದರಿಯಾಗಿಬಿಟ್ಟಳು. ಈಗ ಹೊರಟೇ ಹೋದಳು. ಅತ್ತಿಗೆ ಇಲ್ಲಿ ಇರಕೂಡದು ಎಂದಿದ್ದರೆ ಅವಳನ್ನು ಕಳುಹಿಸಿಬಿಡುತ್ತಿದ್ದೆ. ನನಗೇನು ಬೇಕಾಗಿತ್ತು. ಇವರು ಗಂಡ ಹೆಂಡತಿ ಸುಖವಾಗಿರುತ್ತೇವೆ ಎಂದರೆ ಬೇಡ ಎನ್ನುತ್ತಿದ್ದೆನೇ ನಾನು" ಎಂದರು.

ಲಲಿತೆಯ ಅಣ್ಣ ಶಾಸ್ತ್ರಿಗಳಿಗೆ "ನೀವು ಎಲ್ಲಿ ಬರುವುದಕ್ಕಾಗುತ್ತದೆ. ಅವರು ಎತ್ತಲಾಗಿ ಹೋದರು ಎಂತ ತಿಳಿದರೆ ನಾನು ಹೋಗಿ ನೋಡಿಕೊಂಡು ಬರುತ್ತೇನೆ. ಬರುವುದಾದರೆ ಕರೆದುಕೊಂಡೇ ಬರುತ್ತೇನೆ" ಎಂದನು. ಶಾಸ್ತ್ರಿಗಳು ಹಾಗೇ ಆಗಲಿ ಎಂದು ಅರಮನೆಯಲ್ಲಿ ಕೇಳಿ ಇವನ ಜೊತೆಗೆ ಒಬ್ಬ ಆಳನ್ನೂ ದಾರಿಯ ಖರ್ಚಿಗೆ ಇಷ್ಟು ಹಣವನ್ನೂ ಕೊಡಿಸಿ ಇವನನ್ನು ಕಳುಹಿಸಿದರು.

ಸುಬ್ಬಣ್ಣ ಹೋದ ದಾರಿ ಇವನಿಗೆ ಪತ್ತೇ ಹತ್ತಲಿಲ್ಲ. ಹತ್ತಾರು ದಿನದ ಮೇಲೆ ಇವನೂ ಆಳೂ ಹಿಂದಕ್ಕೆ ಬಂದರು. ಎಲ್ಲರೂ ಹತಾಶ ರಾದರು. ಶಾಸ್ತ್ರಿಗಳು ಮಗ ದೇಶಾಂತರ ಹೋದನೇ ಎಂದು ಮರುಗು ವುದಕ್ಕೆ ಆರಂಭಿಸಿದರು. ಯಜಮಾನಿ, ನಾನು ಪಾಪಿ ಅಂಥಾ ಸೊಸೆ ಯನ್ನ ಇಟ್ಟುಕೊಂಡು ಬಾಳುವುದಕ್ಕೆ ಪುಣ್ಯ ಇಲ್ಲ ಎಂದುಕೊಂಡು, ಮಗ ಹಿಂದಕ್ಕೆ ಬರಲಿ ತ್ರಿಣೇಶ್ವರನ ದೇವಸ್ಥಾನಕ್ಕೆ ನೂರುಕಾಯಿ ಒಡೆಯುತ್ತೇನೆ ಎಂದು ಹರಸಿಕೊಂಡರು. ಮನೆಯ ಮೇಲೆ ದುಃಖದ ಕತ್ತಲು ಕವಿದುಕೊಂಡಿತು.

ಮನೆಯಿಂದ ಹೊರಟ ರಾತ್ರಿ ಎಲ್ಲಿಗೆ ಹೋಗುವುದೆಂದು ಸುಬ್ಬಣ್ಣ ಗೊತ್ತುಮಾಡಿಕೊಂಡಿರಲಿಲ್ಲ. ಎಲ್ಲಿಗಾದರೂ ಹೋಗುವುದು. ಈ ಮನೆ ಯಿಂದ ಎಷ್ಟು ದೂರ ಹೋದರೆ ಅಷ್ಟು ಒಳ್ಳೆಯದು. ಹೋದಲ್ಲಿ ಒಂದು ಸಣ್ಣ ಮನೆ ಮಾಡಿ ಈ ಹೆಂಡತಿಯನ್ನೂ ಈ ಮಗನನ್ನೂ ಅಲ್ಲಿ ಇಟ್ಟು ಅವರಿಗೆ ಸಂಪಾದಿಸಿ ಹಾಕುವುದು. ಸಂಗೀತದ ಪಾಠಹೇಳಿ ಸಂಪಾದಿಸುವುದಕ್ಕೆ ಏನೂ ಕಷ್ಟವಿಲ್ಲ. ಸೂಳೆಯರಿಗೆ ಬೇಕಾದರೂ ಪಾಠ ಹೇಳುವುದು. ಮಗನಿಗೆ ದಿನಾ ಮೊಸರು ಬೇಕು ಎಂದರೂ ಹಾಕುವುದು. ಹೆಂಡತಿ ಯಾವಾಗಲೂ ನಿಷ್ಕಾರಣವಾಗಿ ಮಾತುಗಳನ್ನು ಕೇಳುತ್ತಾ ಕಣ್ಣೀರು ಬಿಡುತ್ತಾ ಇರುವುದನ್ನು ತಪ್ಪಿಸುವುದು. ಇಷ್ಟೇ ಅವನ ಯೋಚನೆ. ಇದಿಷ್ಟನ್ನು ಮನಸ್ಸಿನಲ್ಲಿಟ್ಟುಕೊಂಡು ಅಲ್ಲಲ್ಲಿ ಎರಡು ದಿನ ಮೂರು ದಿನ ನಿಂತು ಅವನು ನಾಲ್ಕು ತಿಂಗಳಿಗೆ ಕಾಶಿಯನ್ನು ಸೇರಿದನು. ಹೆಂಡತಿ ಗರ್ಭಿಣಿ ಎನ್ನುವುದನ್ನೇ ಅವನು ಮರೆತನು. ಪ್ರಯಾಣದ ಆಯಾಸದಿಂದ ರಾಯಚೂರಿನ ಬಳಿ ಲಲಿತೆಗೆ ಗರ್ಭಸ್ರಾವ ವಾಯಿತು. ಅಲ್ಲಿ ಒಂದು ವಾರ ನಿಂತು ಮುಂದಕ್ಕೆ ನಡೆದರು. ಕಾಶಿಗೆ ಬರುವ ಹೊತ್ತಿಗೆ ಲಲಿತೆಗೆ ಬಹಳ ನಿತ್ರಾಣ. ಮಗು ಬಣಗಿಕೊಂಡಿದೆ. ಸುಬ್ಬಣ್ಣನಿಗೂ ಸಾಕಾಗಿತ್ತು. ಅಲ್ಲಿ ಒಂದು ತಿಂಗಳು ನಿಂತರು. ಆ ಮೇಲೆ ಅಲ್ಲಿಂದ ಹೊರಟು ಕಲಿಕತ್ತೆಯನ್ನು ಸೇರಿದರು. ಸುಬ್ಬಣ್ಣ ಅಲ್ಲಿ ಒಂದು ಸಣ್ಣ ಮನೆಯನ್ನು ಮಾಡಿಕೊಂಡು ಸಂಸಾರವನ್ನು ಹೂಡಿ, ಕೆಲವು ಪಾಠಗಳನ್ನು ಸಂಪಾದಿಸಿ, ಜೀವನಕ್ಕೆ ದಾರಿಮಾಡಿಕೊಂಡನು.

ಐದು ಆರು ತಿಂಗಳು ಅಷ್ಟು ಹಣವನ್ನು ಸೇರಿಸಿ ಕಲಿಕತ್ತೆಯಲ್ಲಿ ಒಬ್ಬ ಸಾಹುಕಾರನನ್ನು ಕೇಳಿ ಇಂಥವರಿಂದ ಎಂದು ತಿಳಿಸದೆ ಮೈಸೂರಿನಲ್ಲಿ ನೀಲಾಸಾನಿಗೆ ಈ ಹಣವನ್ನು ಸೇರಿಸಬೇಕೆಂದು ಸ್ವಲ್ಪ ರೊಕ್ಕವನ್ನು ಕೊಟ್ಟನು. ಅವನು ಪ್ರಯಾಣಕ್ಕೆಂದು ಆ ಹಣವನ್ನು ನೀಲಾ ಹತ್ತಿರ ತೆಗೆದುಕೊಂಡುಬಂದಿದ್ದನು. ಇಂದು ಆ ಸಾಲ ತೀರಿತು. ಇನ್ನು ಮೈಸೂರಿನ ಸಂಬಂಧ ತನಗೇನೂ ಇಲ್ಲವೆಂದು ಆ ಕಡೆಯ ಯೋಚನೆಯನ್ನು ಬಿಟ್ಟು ಅವನು ಬಂಗಾಳಾದಲ್ಲಿ ಹುಟ್ಟಿಬೆಳೆದೆನೆಂದೇ ತಿಳಿದುಕೊಂಡು ಅಲ್ಲಿ ದಿನಗಳನ್ನು ಕಳೆಯುವುದಕ್ಕಾರಂಭಿಸಿದನು.

ಸುಬ್ಬಣ್ಣನು ಹೀಗೆ ಕಲಿಕತ್ತೆಯಲ್ಲಿ ಮೂವತ್ತೈದು ವರುಷ ಇದ್ದನು. ಆ ಮೂವತ್ತೈದು ವರುಷವೂ ಅವನಿಗೂ ಮೈಸೂರಿಗೂ ಸಂಬಂಧವಿಲ್ಲದಂತೆ ಇತ್ತು. ಈತನ ಜೀವನದ ಈ ಭಾಗವನ್ನು ನಾನು ಬಹಳ ವಿಸ್ತಾರವಾಗಿ ವರ್ಣಿಸುವುದಿಲ್ಲ. ಒಂದು ವಿಷಯವೇನೆಂದರೆ, ನನಗೆ ಅದು ಅಷ್ಟು ಚೆನ್ನಾಗಿ ತಿಳಿಯದು. ಸುಬ್ಬಣ್ಣನವರು ಯಾವ ವಿಷಯವನ್ನು ಕುರಿತೂ ಬಹಳ ಮಾತನಾಡುತ್ತಿರಲಿಲ್ಲ. ಈ ವರ್ಷಗಳನ್ನು ಕುರಿತಂತೂ ತೀರ ಮೌನವನ್ನೇ ಧರಿಸಿದ್ದರು. ನಾನು ಅವರ ಸಂಗಡ ಮಾತನಾಡುತ್ತಾ ನಾನಾಗಿಯೇ ಕಲಿಕತ್ತೆಯ ಮಾತನ್ನೆತ್ತಿದರೆ, ಆ ಮಾತು ಬೇಡಿ ಎನ್ನುವರು. ಅವರಾಗಿ ಮಾತನಾಡುತ್ತ ಆಗಾಗ ಹೇಳಿದ ಒಂದೊಂದು ಮಾತಿನಿಂದ ಅಲ್ಲಿ ಅವರು ಇದ್ದ ರೀತಿಯನ್ನು ನಾನು ಊಹಿಸಿ ತಿಳಿದುಕೊಳ್ಳಬೇಕಾಯಿತು. ಮೈಸೂರಿನಲ್ಲಿ ತಂದೆತಾಯಿ ತನಗಾಗಿ ಚಿಂತಿಸುವರಲ್ಲಾ ಎಂದು ಆತನಿಗೆ ಒಂದೆರಡು ವರುಷಗಳವರೆಗೆ ಯೋಚನೆಯೇ ಬರಲಿಲ್ಲ. ತಾನು ನೀಲಾಸಾನಿಗೆ ಹಣ ಕಳುಹಿಸಿದ್ದರಿಂದ ತಾನು ಎಲ್ಲೋ ಜೀವಂತನಾಗಿರುವ ವಿಷಯ ಮೈಸೂರಿನಲ್ಲಿ ಒಬ್ಬರಿಗಾದರೂ ತಿಳಿಯುವುದು ಎಂದುಕೊಂಡನು. ಅದು ಆದದ್ದೂ ಹಾಗೆಯೇ. ಸಾಹುಕಾರ ವರ್ಧಮಾನಯ್ಯನವರು ಬೊಂಬಾಯಿ ಸಾಹುಕಾರರೊಬ್ಬರಿಂದ ಬಂದ ಹುಂಡಿಯ ಪ್ರಕಾರ ನೀಲಾಸಾನಿಗೆ ಹೇಳಿಕಳುಹಿಸಿ ನಿನಗೆ ಉತ್ತರ ದೇಶದಿಂದ ಬರಬೇಕಾದ ಹಣ ಯಾವುದಿದೆ? ಎಂದು ಕೇಳಿದರು. ನೀಲಾ ಯಾವುದೂ ಇಲ್ಲ ಎಂದಳು. ಸಾಹುಕಾರರು, ಬೊಂಬಾಯಿಂದ ನಿನ್ನ ಹೆಸರಿಗೆ ಬಂದಿದೆ,

ಉತ್ತರ ದೇಶದಿಂದ ಯಾರೋ ಕಳುಹಿಸಿದ್ದು ಎಂದರು. "ಎಷ್ಟು ರೂಪಾಯಿಗೆ?" "ನೂರೈವತ್ತು." ನೀಲಾಗೆ ಆಗ ಹೊಳೆಯಿತು. ತಾನು ಸುಬ್ಬಣ್ಣನಿಗೆ ಕೆಲವು ತಿಂಗಳ ಹಿಂದೆ ಆ ಹಣವನ್ನು ಕೊಟ್ಟಿದ್ದಳು. ಆ ಮಾರನೆಯ ದಿನದಿಂದಲೇ ಅವನು ತನ್ನ ಮನೆಗೆ ಬರಲಿಲ್ಲ. ದೇಶಾಂತರ ಹೋದನೆಂದು ಆಮೇಲೆ ತಿಳಿಯಿತು. ಆ ದಿನ ರಾತ್ರಿ ಸುಬ್ಬಣ್ಣ ಬಂದಾಗ ಅವಳು ಇದೇನು ಎಂದೂ ಬರದವನು ಈ ದಿನ ಇಷ್ಟು ಹೊತ್ತಿನಲ್ಲಿ ಬಂದಿದಾನೆ ಎಂದುಕೊಂಡಳು. ಸುಬ್ಬಣ್ಣ "ನೀಲಾನಾನಿ, ನಿನ್ನಿಂದ ಒಂದು ಕೆಲಸ ಆಗಬೇಕಾಗಿದೆ" ಎಂದನು. ನೀಲಾ "ಏನು ಅಪ್ಪಣೆ ಯಾಗಲಿ" ಎಂದಳು. "ಸ್ವಲ್ಪ ಹಣಬೇಕು." "ಎಷ್ಟು?" "ಒಂದು ನೂರು ರೂಪಾಯಿ ಕಡವಾಗಿ ಕೊಟ್ಟಿರು. ತಿರಿಗಿ ಕೊಟ್ಟುಬಿಡುತ್ತೇನೆ." ನೀಲಾ "ಅಯ್ಯೋ, ಇಷ್ಟೇನೆ" ಎಂದು ಒಳಗೆ ಹೋಗಿ ನೂರು ರೂಪಾಯಿನ ನೋಟು ಒಂದನ್ನೂ ಐವತ್ತು ರೂಪಾಯಿನ ನೋಟು ಒಂದನ್ನೂ ತಂದು, ನೂರು ರೂಪಾಯಿನದನ್ನ ಕೊಟ್ಟು "ಸಾಕೆ? ಇನ್ನೊಂದು ಐವತ್ತು ರೂಪಾಯಿ ಇರಲಿ, ಬೇಕಾದರೆ ತಕ್ಕೊಳ್ಳಿ" ಎಂದಳು. ಸುಬ್ಬಣ್ಣ ಸ್ವಲ್ಪ ಹಿಂತೆಗೆದು "ಇರಲಿ, ಕೊಡು ಕಳುಹಿಸಿಬಿಡುತ್ತೇನೆ" ಎಂದನು. ನೀಲಾ—"ಕೊಡಬೇಕಾದದ್ದೇನೂ ಇಲ್ಲ. ನಿಮ್ಮಂಥ ವರಿಗೆ ಕೊಟ್ಟಲ್ಲವೆ ನಮ್ಮ ಜನ್ಮ ಸಾರ್ಥಕವಾಗಬೇಕು" ಎಂದಳು. ಕೊಡಬೇಕಾದದ್ದಿಲ್ಲವೆಂದು ಹೇಳುವುದರಲ್ಲಿ ಕೊಟ್ಟು ಕಳುಹಿಸುವುದು ಬೇರೆ ಕಡೆಯಿಂದ ಎಂಬ ಅವನ ಮಾತಿನ ಭಾವ ಅವಳಿಗೆ ತೋರಲಿಲ್ಲ. ಅವನು ದೇಶಾಂತರ ಹೋದನೆಂದು ತಿಳಿದಮೇಲೆ ಅದನ್ನು ಅವಳು ನೆನೆದು ಕೊಂಡಳು. ತನ್ನ ದೇವರನ್ನು ದೂರ ಕಳುಹಿಸುವುದಕ್ಕೆ ತಾನು ಈ ಹಣವನ್ನು ಕೊಟ್ಟೆನೇ ಎಂದುಕೊಂಡಳು. ಐದಾರು ತಿಂಗಳಾದಮೇಲೆ ಎಲ್ಲಿಂದಲೋ ಬಂದ ಈ ನೂರೈವತ್ತು ರೂಪಾಯಿ ಸುಬ್ಬಣ್ಣನು ಸಾಲಾ ತೀರಿಸುವುದಕ್ಕೆ ಕಳುಹಿಸಿದ್ದೆಂದು ಅವಳು ತಿಳಿದುಕೊಂಡಳು. ಅವಳ ಅಂತರ್ಯದಲ್ಲಿ ವರ್ಣಿಸಲಾಗದ ಒಂದು ಸಂಕಟವಾಯಿತು. ಹಣವನ್ನು ತೆಗೆದುಕೊಂಡು ಮನೆಗೆ ಬಂದು ಅದನ್ನು ದೇವರ ಪೆಟ್ಟಿಗೆಯಲ್ಲಿಟ್ಟು ಅದಕ್ಕೆ ಅಂದಿನಿಂದ ಸುಬ್ಬಣ್ಣನ ಜ್ಞಾಪಕಾರ್ಥವಾಗಿ ಪೂಜೆಮಾಡುವುದಕ್ಕೆ ಮೊದಲು

ಮಾಡಿ ಒಂದೆರಡು ವರುಷದ ಮೇಲೆ ತೀರಾ ವಿಧಿಯಿಲ್ಲದೆ ಬರುವವರೆಗೂ ಅದನ್ನು ಖರ್ಚುಮಾಡದೆ ಇಟ್ಟಿದ್ದಳು. ಸುಬ್ಬಣ್ಣನ ತಾಯಿತಂದೆಗಳಿಗೂ ಈ ಹಣ ಬಂದ ಮಾತು ತಿಳಿಯುವಂತೆ ಮಾಡಿದಳು. ತಾಯಿ ನಮ್ಮನ್ನು ಮರೆತರೂ ಸೊಸೆಯ ಜ್ಞಾಪಕ ಇದೆಯಲ್ಲ ಎಂದು ನಿಷ್ಠೂರ ನುಡಿದರು. ತಂದೆ, ನೀನು ಇನ್ನೂ ನಿಷ್ಠೂರ ಬಿಡಲಿಲ್ಲವಲ್ಲಾ, ಏನು ಮಾಡೋದು, ಎಂದರು. ಯಜಮಾನಿ "ಅವನದು ಯಾವಾಗಲೂ ಹಠ. ನನ್ನ ಹಾಗೇ ಅದ. ನಾನೇನು ಮಾಡಲಿ. ನನ್ನ ಕರ್ಮ. ಆ ಸೊಸೇನ ಇಟ್ಕೊಂಡು ಸಂಸಾರಮಾಡೋ ಪುಣ್ಯ ಇಲ್ಲ. ಅಷ್ಟು ಅನ್ನುತ್ತಾ ಇದ್ದೆನಲ್ಲಾ ಒಂದು ದಿನ ಒಂದು ಮಾತು ಬದಲು ಹೇಳಿದ್ದಿಲ್ಲ. ನನ್ನ ಕಂದ ಎಲ್ಲಿ ಹೋದಳೋ, ಎಂದು ಬರುತ್ತಾಳೊ" ಎಂದು ಕಣ್ಣೀರು ಸುರಿಸಿದರು. ಸೊಸೆಯನ್ನು ಒಂದು ಸಲ ನೋಡಿಯೇನೇ ಎಂದು ಬಹಳ ಆಸೆಪಟ್ಟರು.

ಯಜಮಾನಿ ಮತ್ತೆ ಸೊಸೆಯನ್ನು ನೋಡಲಿಲ್ಲ. ಮಾತು ಕಠಿನ ವಾಗಿದ್ದರೂ, ನಡತೆ ಕಠಿನವಾಗಿದ್ದರೂ, ಅವರು ಮನಸ್ಸಿನಲ್ಲಿ ಕಠಿನರಾದವ ರಲ್ಲವೆಂದು ತೋರುತ್ತದೆ. ಅತ್ತೆಯಾದವಳು ಸೊಸೆಗೆ ಬಹಳ ಸಲಿಗೆ ಕೊಡಬಾರದೆಂದು ಹಾಗೆ ನಡೆದುಕೊಂಡಿದ್ದರು. ಸೊಸೆ ಹೊರಟುಹೋದ ಮೇಲೆ ಅವಳ ಮೇಲೆ ಕನಿಕರ ಹುಟ್ಟಿತು. ಮಗನನ್ನೂ ಸೊಸೆಯನ್ನೂ ಅಟ್ಟಿದೆನಲ್ಲಾ ಎಂದು ಯೋಚನೆಯಲ್ಲಿ ಆಕೆ ಮೆಲ್ಲಗೆ ಕರಗಿಹೋದರು. ಎರಡು ಮೂರು ವರುಷ ಕಳೆಯುವವರೆಗೂ ಅವರು ಹಿಂದಕ್ಕೆ ಬಂದಾರು ಎಂದು ತಂದೆತಾಯಿ ಇಬ್ಬರೂ ಎದುರು ನೋಡುತ್ತಿದ್ದರು. ಆಮೇಲೆ ಇಬ್ಬರೂ ಆ ಆಸೆಯನ್ನು ಬಿಟ್ಟರು. ಒಂದು ಸಲ ಯಜಮಾನಿ "ಬರದೇ ಇದ್ದರೆ ಬಿಡಲಿ, ಎಲ್ಲಿಯಾದರೂ ಸುಖವಾಗಿದ್ದಾರೆಂದು ತಿಳಿದರೆ ಸಾಕು" ಎಂದು ಹೇಳಿದರು. ಶಾಸ್ತ್ರಿಗಳು "ನಮ್ಮ ಎದುರಿಗೆ ಇಲ್ಲದೆ ಎಲ್ಲೋ ಸುಖವಾಗಿದ್ದರೆ ನಮಗೆ ಬಂದದ್ದೇನು" ಎಂದರು.

ಮುದುಕನಿಗೆ ವಯಸ್ಸಾಗುತ್ತಾ ಬಂದದ್ದರಿಂದ ಒಬ್ಬಳಲ್ಲದೆ ಇದ್ದರೆ ಒಬ್ಬ ಮಗಳು ಬಂದು ಮನೆಯಲ್ಲಿರುವಂತೆ ಏರ್ಪಾಡು ಮಾಡಿಕೊಂಡರು. ಮುದುಕನು ಮಗಳ ಮಕ್ಕಳೊಂದಿಗೆ ಸ್ವಲ್ಪ ಆಟವಾಡುವನು. ಮಧ್ಯೆ ಆ ದೇಶಾಂತರ ಹೋದ ಮೊಮ್ಮಗನ ಜ್ಞಾಪಕ ಬಂದು ಆಟವನ್ನು ಬಿಟ್ಟು

ಗೋಡೆಯನ್ನು ನೋಡುತ್ತಾ ಧ್ಯಾನದಲ್ಲಿ ಕುಳಿತುಕೊಳ್ಳುವನು. ಅದು ಏನು ಧ್ಯಾನವೆಂದು ಮನೆಯಲ್ಲಿ ಎಲ್ಲಾ ಬಲ್ಲರು. ಏನು ಸಮಾಧಾನ ಹೇಳು ವುದಕ್ಕೂ ಯಾರಿಗೂ ತೋರದು. ಮಗಳು ಬಂದು "ಅಪ್ಪಾ, ಈ ದಿನ ಮೆಣಸಿನಸಾರು ಮಾಡಲೇ" ಎಂದೋ, "ಈ ಹೊತ್ತು ಪುರಾಣಕ್ಕೆ ಎಷ್ಟು ಹೊತ್ತಿಗೆ ಹೋಗಬೇಕು" ಎಂದೋ ಕೇಳಿ ಆ ಯೋಚನೆಯನ್ನು ತಪ್ಪಿಸುವಳು. ಹೀಗೆ ಹತ್ತು ವರುಷ ಕಳೆಯಿತು.

ಆಗ ಹರಿದ್ವಾರದಲ್ಲಿ ಒಂದು ಮೇಳ ನಡೆಯಿತು. ಶಾಸ್ತ್ರಿಗಳು ಅರಮನೆಯವರನ್ನು ಕೇಳಿಕೊಂಡು ಸ್ವಲ್ಪ ಸಹಾಯ ತೆಗೆದುಕೊಂಡು ಗಂಗಾ ಯಾತ್ರೆಗೆಂದು ಹೊರಟರು. ಜೊತೆಯಲ್ಲಿ ಯಜಮಾನಿಯೂ ಇದ್ದರು. ಮೈಸೂರಿನಿಂದ ಇನ್ನೆರಡು ಮೂರು ಮನೆಯವರು ತಿಳಿದವರು ಹೊರಟಿದ್ದರು. ಶಾಸ್ತ್ರಿಗಳಿಗೆ ಮನಸ್ಸಿನಲ್ಲಿ ಒಂದು ಚಪಲ; ಆ ಗುಂಪಿ ನಲ್ಲಿ ಎಲ್ಲಿಯಾದರೂ ಮಗ ಕಣ್ಣಿಗೆ ಬೀಳಬಹುದು ಎಂದು. ಆದರೆ ಅದನ್ನು ಅವರು ಯಜಮಾನಿಗೆ ಹೇಳಲಿಲ್ಲ. ಯಜಮಾನಿಗೂ ಈ ಚಪಲ ಇತ್ತು. ಆದರೆ ಅವರೂ ಆ ಮಾತನ್ನಾಡಲಿಲ್ಲ. ಅದಕ್ಕೆ ತಕ್ಕಹಾಗೆ ಇಲ್ಲಿ ಕಲಿಕತ್ತೆ ಯಲ್ಲಿ ಲಲಿತಮ್ಮ "ನಾವು ಈ ಸೀಮೆಯಲ್ಲಿರುವಾಗ ಈ ಮೇಳಕ್ಕೆ ಹೋಗದೆ ಇದ್ದರೆ ಇನ್ನು ಯಾವಾಗ ಹೋಗುವುದು" ಎಂದು ಬಲವಂತಮಾಡಿದ್ದ ರಿಂದ ಸುಬ್ಬಣ್ಣ ಅವಳನ್ನೂ ಮಗನನ್ನೂ ಕರೆದುಕೊಂಡು ಹರಿದ್ವಾರಕ್ಕೆ ಹೊರಟನು. ಲಲಿತಮ್ಮ ಆ ವೇಳೆಗೆ ಇಪ್ಪತ್ತು ಸಲ ಊರಿಗೆ ಹೋಗೋಣ ಎಂದು ಅವನನ್ನು ಬೇಡಿಕೊಂಡಿದ್ದಳು. ಅವನು ಒಪ್ಪಿರಲಿಲ್ಲ. ಒಂದೊಂದು ಸಲವೂ, ಆ ಒಂದು ಮಾತನ್ನು ಬಿಟ್ಟು ಇನ್ನೇನನ್ನಾದರೂ ಕೇಳು, ಬೇಡ ವೆನ್ನುವುದಿಲ್ಲ ಎಂದು ಹೇಳುವನು. ಈ ಸಲ ಲಲಿತೆ ಹರಿದ್ವಾರಕ್ಕೆ ಹೋಗೋಣವೆಂದಾಗ ಅವಳಿಗೆ—ಮೈಸೂರ ಕಡೆಯಿಂದ ಜನ ಯಾರಾ ದರೂ ಬರುವರು, ಅವರ ಕೈಲಿ ಕ್ಷೇಮ ಸಮಾಚಾರ ವಿಚಾರಿಸಬಹುದು, ಬೇಕಾದರೆ ಹೇಳಿಕಳುಹಿಸಬಹುದು, ಅದಕ್ಕೆ ಅಲ್ಲಿ ಗಂಡನನ್ನು ಅಪ್ಪಣೆ ಕೇಳುವುದು, ತನ್ನ ಕಡೆ ಜನರನ್ನು ನೋಡಿದಾಗ ಗಂಡನಿಗೂ ಮನಸ್ಸು ಕರಗಬಹುದು ಎಂದು ಚಪಲ. ಸುಬ್ಬಣ್ಣನಿಗೆ ಮೈಸೂರಿನವರನ್ನು ಯಾರ ನ್ನಾದರೂ ಕಂಡು ನಮ್ಮ ನೆಲೆ ಅವರಿಗೆ ತಿಳಿದು ಮೈಸೂರಿಗೆ ಹೋಗುವ

ಪ್ರಮೇಯ ಬಂದೀತೆಂದು ಒಂದು ಭಯ. ಅವನಿಗೆ ಮೈಸೂರಿನ ಆ ಮನೆ ಎಂದರೆ ಅಷ್ಟು ಅಸಹ್ಯ ಹುಟ್ಟಿಬಿಟ್ಟಿತ್ತು. ಹೀಗೆ ಇವರೂ ಹರಿದ್ವಾರಕ್ಕೆ ಬಂದರು. ಒಂದು ದಿನ ಸುಬ್ಬಣ್ಣನನ್ನು ಮೈಸೂರಿನ ಇವರ ಕಡೆಯ ಮನುಷ್ಯನೊಬ್ಬನು ನೋಡಿಯೇ ನೋಡಿದನು; ಸುಬ್ಬಣ್ಣ, ಸುಬ್ಬಣ್ಣ ಎಂದು ಕೂಗುತ್ತ ಆತನ ಹಿಂದೆಯೇ ಬಂದನು. ಸುಬ್ಬಣ್ಣ ಒಂದು ಸಲ ಹಿಂತಿರುಗಿ ನೋಡಿ ಬಲವಾಗಿ ಗುಂಪಿನಲ್ಲಿ ನುಗ್ಗಿದನು. ಆತನು "ನಿಮ್ಮ ತಾಯಿತಂದೆ ಬಂದಿದ್ದಾರೆ" ಎಂದು ಕೂಗಿ ಹೇಳಿದನು. ಸುಬ್ಬಣ್ಣ ಅರ್ಧ ಕ್ಷಣ ತಂದೆಯನ್ನು ನೋಡುವುದೇ ಎಂದುಕೊಂಡು, ಒಡನೆ ಛೆ ಛೆ ಏನು ಹುಚ್ಚು, ಆ ಹುಟ್ಟು ಇಲ್ಲವೆಂದು ಬಂದಿರುವವನಿಗೆ ತಂದೆಯಲ್ಲಿ ತಾಯಿ ಯಲ್ಲಿ ಎಂದು ಧೈರ್ಯಮಾಡಿ ಹೊರಟೇ ಹೋದನು. ಆಮೇಲೆ ಅರ್ಧ ಗಂಟೆಯೊಳಗಾಗಿ ಅವನು ಹೆಂಡತಿಗೆ ಈ ಮಾತನ್ನು ಹೇಳದೆ ಅವಳನ್ನೂ ಮಗನನ್ನೂ ಕರೆದುಕೊಂಡು ಕಲಿಕತ್ತೆಗೆ ಮತ್ತೆ ಹೊರಟುಬಿಟ್ಟನು. ಅವನನ್ನು ನೋಡಿದ್ದ ಮನುಷ್ಯನು ಬಂದು ಅವನ ತಂದೆಗೂ ತಾಯಿಗೂ ತಾನು ಸುಬ್ಬಣ್ಣನನ್ನು ಕಂಡದ್ದಾಗಿ ಹೇಳಿದನು. ತಾಯಿ ಅದನ್ನು ನಂಬಿ ದಂತೆ ತೋರಲಿಲ್ಲ. "ಯಾರನ್ನು ನೋಡಿ ಸುಬ್ಬಣ್ಣ ಎಂದುಕೊಂಡೆಯೋ" ಎಂದರು. ಶಾಸ್ತ್ರಿಗಳು ಮಾತ್ರ ಮನಸ್ಸಿನಲ್ಲಿ "ಅವನು ಸುಬ್ಬಣ್ಣನೇ ಸರಿ. ನೋಡುವುದಾಗಿದ್ದರೆ ಅವನು ಇವನ ಜೊತೆಗೆ ಬರುತ್ತಾ ಇದ್ದ. ಈ ಜನ್ಮ ದಲ್ಲಿ ಆ ಪುಣ್ಯ ಇಲ್ಲ" ಎಂದುಕೊಂಡರು. ಗಂಗಾ ಯಾತ್ರೆ ಎಂದು ಹೆಸರಿಟ್ಟು ಸುಬ್ಬಣ್ಣನನ್ನು ನೋಡಿಯೇನೆಂದು ಬಂದ ತನ್ನ ಪಾಪವನ್ನು ಕ್ಷಮಿಸಬೇಕೆಂದು ಗಂಗಾ ಮಾತೆಗೆ ಪ್ರಾರ್ಥನೆ ಮಾಡಿದರು. ಮೇಳ ಮುಗಿದ ಮೇಲೆ ಇವರೆಲ್ಲ ಮೈಸೂರಿಗೆ ಹಿಂತಿರುಗಿ ಬಂದರು.

ಬಂದ ಒಂದು ವರುಷದೊಳಗಾಗಿ ಶಾಸ್ತ್ರಿಗಳು ತೀರಿಹೋದರು. ಯಜಮಾನಿ ಮಗಳ ಮಗನೊಬ್ಬನಿಂದ ಅವರ ಕರ್ಮಾಂತರಗಳನ್ನು ನಡೆ ಯಿಸಿ, ಮನೆಯನ್ನು ಇರುವುದಕ್ಕೆ ಇನ್ನು ಯಾರಿಗೋ ಕೊಟ್ಟು, ತನ್ನ ಹೆಣ್ಣು ಮಕ್ಕಳ ಮನೆಗಳಲ್ಲಿ ಇಲ್ಲಿ ಕೊಂಚ ದಿನ ಅಲ್ಲಿ ಕೊಂಚ ದಿನ ಇರುತ್ತಿದ್ದರು. ವಯಸ್ಸು ಬಹಳವಾಗದಿದ್ದರೂ ಕೊರಗಿದ್ದು ಹೆಚ್ಚಾಗಿದ್ದದ್ದರಿಂದ ಆಕೆಯೂ ಆಮೇಲೆ ಮೂರು ವರುಷಗಳಲ್ಲಿ ತೀರಿಹೋದರು. ಅಳಿಯಂದಿರು ಆ

ಮನೆಯನ್ನು ಮಾರಿ ಆದರ ಬೆಲೆಯನ್ನು ಹಂಚಿಕೊಂಡರು. ಸುಬ್ಬಣ್ಣನ ತಾಯಿತಂದೆಗಳ ಕತೆ ಇಲ್ಲಿಗೆ ಮುಗಿಯಿತು.

೫

ಇತ್ತ ಕಲಿಕತ್ತೆಯಲ್ಲಿ ಸುಬ್ಬಣ್ಣನೂ ಅಷ್ಟೇನೂ ಸಂತೋಷವಾಗಿರ ಲಿಲ್ಲ. ಅವನ ಪ್ರಕೃತಿ ಸಂತೋಷವಾಗಿರತಕ್ಕ ಪ್ರಕೃತಿ ಅಲ್ಲ. ಜನರಲ್ಲಿ ಅವನು ತೀರಾ ಅಸಾಧ್ಯವಾದ ಒಳ್ಳೆಯತನವನ್ನು ಅಪೇಕ್ಷಿಸುವನು. ಇಂಥ ಸ್ವಭಾವದವರಿಗೆ ಸೂರ್ಯನು ಸಾಕಾದಷ್ಟು ತೇಜಸ್ವಿಯಲ್ಲ; ಗಾಳಿ ಸಾಕಾದಷ್ಟು ಹಗುರವಲ್ಲ. ಮೈಸೂರಿನ ಜನ ಸರಿಹೋಗಲಿಲ್ಲವೆಂದೇ ಅವನು ಕಲಿಕತ್ತೆಗೆ ಬಂದದ್ದು. ಮನೆಯ ಜನ ಮಾತ್ರ ಅಲ್ಲ. ಹೊರಗಣ ಜನರೂ ಹಾಗೆಯೇ ಆಗಿದ್ದರಷ್ಟೆ. ಸಂಗೀತಗಾರರಲ್ಲಿ ಎಲ್ಲಿಲ್ಲದ ಹೊಟ್ಟೆ ಯುರಿ. ಅವರಿವರು ಸೇರಿ ಅವನು ಮಹಾರಾಜರ ಮುಂದೆ ಹಾಡುವು ದಕ್ಕಿಲ್ಲದಂತೆ ಮಾಡಿದ್ದರು. ಇದರಿಂದ ಆ ಪ್ರಪಂಚವೇ ಅವನಿಗೆ ಬೇಡವಾಗಿ ಹೋಗಿತ್ತು. ಇಲ್ಲಿಗೆ ಬಂದನು. ಈ ಪ್ರಪಂಚವೂ ಅದೇ ಪ್ರಪಂಚವೇ. ಇಲ್ಲಿಯೂ ಜನರಲ್ಲಿ ಅಸೂಯೆ, ಅನಾದರ, ಅಸಹನ. ಹುಟ್ಟಿದ ಊರಿ ನಲ್ಲಿಯೇ, ಬಾರಪ್ಪ, ಬಂದೆಯಾ ಎನ್ನುವವರಿಲ್ಲದಿದ್ದರೆ ಬೇರೆ ಸೀಮೆಯಲ್ಲಿ ಯಾರು ಕೇಳುವರು. ಹೇಗೋ ಕೊಂಚ ದಿನದಲ್ಲಿ ಕೆಲವು ಕಡೆ ಪಾಠ ಸಿಕ್ಕಿತು. ಅಲ್ಲದೆ ಇವನ ದಾಕ್ಷಿಣಾತ್ಯ ಪದ್ಧತಿಯನ್ನು ಕಂಡು ಅನೇಕರು ಮೆಚ್ಚಿ ಇವನಿಂದ ಪಾಠ ಹೇಳಿಸಿಕೊಳ್ಳುವುದಕ್ಕಾರಂಭಿಸಿದರು. ಅಲ್ಲಲ್ಲಿ ಸಣ್ಣ ಸಣ್ಣ ಕಚೇರಿಗಳು ಏರ್ಪಾಡಾಗಿ ಸ್ವಲ್ಪ ಹಣ ಬಂತು. ಅಂತೂ ಜೀವನಕ್ಕೆ ಯಾವ ವಿಧವಾದ ಯೋಚನೆಯೂ ಇಲ್ಲದಂತಿತ್ತು. ಹೆಂಡತಿಗೆ ಒಳ್ಳೆಯ ಸೀರೆಗಳನ್ನು ತೆಗೆದುಕೊಟ್ಟನು. ಮಗನಿಗೆ ಒಳ್ಳೆಯ ಬಟ್ಟೆಗಳನ್ನು ಹೊಲಿಸಿದನು. ಹೊರಗೆ ಜನ ಬೇಕಾದವರಿಲ್ಲದ್ದರಿಂದ ಮನೆಯಲ್ಲಿ ಮನಸ್ಸು ನೆಟ್ಟಿತು. ಹೆಂಡತಿಯ ವಿಷಯದಲ್ಲಿ ಬಹಳ ಕನಿಕರ, ಅವಳ ಸ್ವಭಾವ ತಿಳಿದಹಾಗೆಲ್ಲಾ ಬಹಳ ಪೂಜ್ಯಭಾವ. ಮಗನೆಂದರೆ ಪಂಚಪ್ರಾಣ. ಹೀಗೆ ಹೃದಯದಲ್ಲಿ ಅತಿಶಯವಾಗಿ ಬೆಳೆದ ಪ್ರೇಮವೇ ಗಾನವಾಗಿ ಬಂತೆಂಬಂತೆ ಇವನ ಗೀತದಲ್ಲಿ ಒಂದು ಅಸಾಧಾರಣವಾದ ಕಳೆ ಬಂದು

ಸೇರಿತು. ಸಂಸಾರಿಗಳಿಗೆಲ್ಲ ಸಾಮಾನ್ಯವಾದ ಅರ್ಥ ಸುಖ ಅರ್ಥ ಚಿಂತೆಯ ಮಿಶ್ರಣವೊಂದು ಹಗಲು ರಾತ್ರಿಗಳಲ್ಲಿ ಮನಸ್ಸನ್ನು ಆವರಿಸಿತು.

ಇದ್ದದ್ದರಲ್ಲಿ ಲಲಿತೆ ಸುಖಿಯಾದಳು. ಅವಳಿಗೆ ಸುಬ್ಬಣ್ಣನೇ ದೇವರು, ಸುಬ್ಬಣ್ಣನೇ ಪ್ರಪಂಚ. ಅವನು ಎದುರಿಗಿದ್ದರೆ, ಅವನು ಸುಖವಾಗಿದ್ದರೆ ಅವಳಿಗಿನ್ನೇನೂ ಬೇಕಿಲ್ಲ. ಅಥವಾ ಇನ್ನೇನಾದರೂ ಬೇಕಾದರೂ ಅದರ ವಿಷಯದಲ್ಲಿ ಅಷ್ಟು ಖಂಡಿತವಾದ ಆಸೆಯಿಲ್ಲ. ಇಂಥ ಏಕಾಗ್ರತೆಯು ಹೆಂಗಸರಲ್ಲಿ ಅನೇಕರಿಗೆ ಸಾಧ್ಯ. ಪುರಾಣದ ಸಾವಿತ್ರೀ ಸೀತೆಯರು ಈ ರೀತಿಯ ಮಹಿಳೆಯರು. ಇವರ ಏಕಾಗ್ರತೆಯು ಯಾವ ಋಷಿಯ ತಪಸ್ಸಿಗಿಂತಲೂ ಕಡಿಮೆಯಾದದ್ದಲ್ಲ. ಇವರು ಅದರಿಂದಲೇ ಜೀವನದ ಸಮಸ್ತ ಸಂಸ್ಕಾರಗಳನ್ನೂ ಸಾಧಿಸಿಬಿಡುವರು. ಲಲಿತೆ ಈ ಮೊದಲೇ ಬದುಕಿನಲ್ಲಿ ಒಂದು ದೊಡ್ಡ ಅಂತಸ್ತನ್ನು ಸೇರಿಬಿಟ್ಟಿದ್ದಳು. ಯಾವುದರಲ್ಲೂ ತನ್ನ ಸುಖ, ತನ್ನ ಆಸೆ, ತನ್ನದು ಎನ್ನುವುದನ್ನು ಮರೆಯುವುದನ್ನು ಅವಳು ಕಲಿತು ಮುಗಿಸಿದ್ದಳು. ಈಗಲಾದರೋ ಎಲ್ಲಕ್ಕೂ ತನ್ನ ಮಗ, ತನ್ನ ಗಂಡ; ಇವರು ಹೊರತು ಯಾರೂ ಇಲ್ಲದ್ದರಿಂದ ಅವರ ಮೇಲೆ ತನ್ನ ಹೃದಯದ ಅನಂತವಾದ ದಯೆಯನ್ನು ಸುರಿಸುತ್ತಾ ಅವರಿಗೆ ದೇವಿಯ ಅವತಾರವೆಂಬಂತೆ ರಕ್ಷಕಳಾದಳು. ಅಲ್ಲದೆ ಗಂಡನ ಸಂಗೀತದಲ್ಲಿ ಸ್ವಲ್ಪ ಭಾಗವು ಅವಳಿಗೂ ಬಂದಿತು. ಅವಳು ನೆರೆಹೊರೆಯ ಮಕ್ಕಳನ್ನು ಕರೆದುಕೊಂಡು ಅವರಿಗೆ ಸುಮ್ಮನೆ ನಮ್ಮ ಸೀಮೆಯ ಹಾಡುಗಳನ್ನು ಹೇಳಿಕೊಡುವಳು. ಹೀಗೆ, ಮನೆಯ ಕೆಲಸ, ಗೌರೀ ಪೂಜೆ, ಮಗನನ್ನು ನೋಡಿಕೊಳ್ಳುವುದು, ಗಂಡನಿಗೆ ಬೇಕಾದ್ದನ್ನು ಮಾಡುವುದು, ನೆರೆಹೊರೆಯವರ ಕಷ್ಟಸುಖದಲ್ಲಿ ಕೈಲಾದದ್ದನ್ನು ಮಾಡುವುದು, ಇದರಲ್ಲಿ ಅವಳ ಜೀವನವು ತಕ್ಕಮಟ್ಟಿಗೆ ಸಂಪೂರ್ಣವಾಯಿತು.

ಮನುಷ್ಯನು ಆಯುಸ್ಸನ್ನು ಎಲ್ಲಿ ಬೇಕಾದರೂ ಕಳೆಯಬಹುದು; ಅದಕ್ಕೆ ಅವನು ಕಷ್ಟಪಡಬೇಕಾದದ್ದಿಲ್ಲ. ಕಷ್ಟವೆಲ್ಲಾ ಸರಿಯಾದ ರೀತಿಯನ್ನು ಹುಡುಕುವುದರಲ್ಲಿ. ಸುಬ್ಬಣ್ಣನಿಗೂ ಲಲಿತೆಗೂ ಈ ರೀತಿಯ ಶಾಂತಿಯಲ್ಲಿ ಕಲಿಕತ್ತೆಯಲ್ಲಿ ಹನ್ನೆರಡು ವರುಷಗಳು ಕಳೆದುವು. ಆ ವೇಳೆಗೆ ಅವರಿಗೆ ಒಂದು ಹೆಣ್ಣು ಮಗು ಆಗಿಹೋಗಿದ್ದು ಅದಾದ ಮೂರು ವರುಷದ ಮೇಲೆ

ಇನ್ನೊಂದು ಮಗುವಾಗಿತ್ತು. ಬಹು ದಿನದ ಮೇಲೆ ಹುಟ್ಟಿದ ಈ ಮಗು ವನ್ನು ನೋಡುತ್ತಾ ಸಾಕಿ ಸಲಹುತ್ತಾ ಗಂಡ ಹೆಂಡರು ನಾಲ್ಕು ವರುಷ ಕಳೆದರು. ಆಗ್ಗೆ ಇದ್ದಕ್ಕಿದ್ದ ಹಾಗೆ ಶೇಷನಿಗೆ ವಿಷಮಶೀತಜ್ವರ ಬಂದು ಏನು ಮಾಡಿದರೂ ಉಪಯೋಗವಾಗದೆ ಅವನು ತೀರಿಹೋದನು.

ಲಲಿತೆಗೆ ಅಪಾರವಾದ ದುಃಖ ಒದಗಿತು. ಸುಬ್ಬಣ್ಣನಿಗೆ ಸಿಡಿಲ ಪೆಟ್ಟು ಬಿದ್ದಂತಾಯಿತು. ದಿಕ್ಕುತೋಚದೆ ಲಲಿತಮ್ಮ ಎಂದಿಗಿಂತ ಹೆಚ್ಚಾಗಿ ಗೌರೀ ಪೂಜೆಯಲ್ಲಿ ಮನಸ್ಸನ್ನಿಟ್ಟಳು. ತಾಯಿ, ಹೋದದ್ದಕ್ಕೆ ನಾನು ಅಳುವುದಿಲ್ಲ, ಇರುವವರನ್ನು ಸರಿಯಾಗಿ ಕಾಪಾಡು ಎಂದು ಬೇಡಿ ಕೊಳ್ಳುವಳು. ಈ ತರುಣದಲ್ಲಿ ಅವಳಿಗೆ ಮಾವನವರೂ ಅತ್ತೆಯವರೂ ತೀರಿಹೋದಂತೆ ಕನಸುಗಳಾದುವು. ಆದರೆ ಅದೇನನ್ನೂ ಅವಳು ಗಂಡನಿಗೆ ಹೇಳಲಿಲ್ಲ. ತನ್ನ ಭಯ, ತನ್ನ ಆಸೆ ಏನಿದ್ದರೂ ಎಲ್ಲವನ್ನೂ ದಮನ ಮಾಡುತ್ತಾ, ದೇವರಲ್ಲಿ ಭಕ್ತಿ ಒಂದು ನಿಜ, ಪತಿದೈವದ ಸೇವೆಯೊಂದು ನಿಜ, ಮಿಕ್ಕದ್ದು ನನಗೇನು ಬೇಕು ಎಂದುಕೊಂಡು ಸುಮ್ಮನಾದಳು. ಸುಬ್ಬಣ್ಣನ ಕಷ್ಟ ಪ್ರಕೃತಿಗೆ ಮಗನ ಸಾವು ಬಹು ವಿಪರೀತದ ಪೆಟ್ಟಾಯಿತು. ಲಲಿತೆಗೆ ದೇವರ ಮೇಲೆ ಭಕ್ತಿ ಹುಟ್ಟಿದಂತೆ ಅವನಿಗೆ ಹುಟ್ಟಿರಲಿಲ್ಲ. ದೇವರ ವಿಷಯ ಯೋಚನೆಮಾಡಿದಾಗ, ಏನು ದೇವರು, ರತ್ನದಂತಹ ಮಗನನ್ನು ತಕ್ಕೊಂಡ, ಇನ್ನು ಇದರ ಮೇಲೆ ನನಗೆ ಆಗುವುದೇನು ಎಂದುಕೊಳ್ಳು ವನು. ಸ್ವಲ್ಪ ದಿನದಲ್ಲೇ, ಆದದ್ದಾಯಿತು ಇದಕ್ಕೆ ಯೋಚನೆ ಯಾಕೆ ಎಂದುಕೊಂಡು, ಮತ್ತೆ ಹಿಂದಿನಂತೆ ಪಾಠವೇನು ಮನೆಯೇನು ಮಗುವಿನ ಕೂಡ ಆಟವೇನು ಹೀಗೆ ಕಾಲ ಕಳೆಯುತ್ತಿದ್ದನು. ಆದರೆ ವಯಸ್ಸಿ ನಿಂದಲೂ, ಪ್ರಾಪ್ತವಾಗಿದ್ದ ದೊಡ್ಡ ದುಃಖದಿಂದಲೂ ಮನಸ್ಸು ತನ್ನನ್ನೇ ಅರಿಯದೆ ಸ್ವಲ್ಪ ಮೃದುವಾಗಿತ್ತು.

ಮಗಳಿಗೆ ಒಂಬತ್ತು ವರುಷವಾಗುತ್ತ ಬರಲು, ಲಲಿತಮ್ಮ ಮತ್ತೆ ಊರಿನ ಮಾತನ್ನೆತ್ತಿದಳು. ಹುಡುಗಿಗೆ ಮದುವೆಯ ವಯಸ್ಸು. ಊರಿಗೆ ಹೋಗಿ ಸರಿಯಾದ ಒಬ್ಬ ವರನಿಗೆ ಕೊಟ್ಟು ಮದುವೆ ಮಾಡಬೇಕು. ಸುಬ್ಬಣ್ಣನಿಗೆ ಊರಿಗೆ ಹೋಗಲು ಇಷ್ಟವಿಲ್ಲ. ತಂದೆತಾಯಿಗಳ ಹತ್ತಿರ ಹೋಗಬೇಕು. ಅವರು ಇದಾರೋ ಇಲ್ಲವೋ. ಇಲ್ಲಿಗೆ ಬಂದಾಗ ಶೇಷ

ನನ್ನು ಕರೆದುಕೊಂಡು ಬಂದವನು ಹೋಗುವಾಗ ಶೇಷನಿಲ್ಲದೆ ಹೋಗುವುದು ಅವನಿಗೆ ಒಪ್ಪಲಿಲ್ಲ. ಆದರೆ ಏನು ಮಾಡುವುದು. ಮಗಳಿಗೆ ಮದುವೆ ಮಾಡಬೇಕು. ಇಷ್ಟರಲ್ಲೇ ಹೊರಡೋಣವೇ ಒಂದು ಕಾಗದ ಹಾಕೋಣವೇ ಎಂದುಕೊಂಡಿರುವಲ್ಲಿ ಒಂದು ದಿನ ಗಂಗಾನದಿಯಲ್ಲಿ ಸ್ನಾನಮಾಡುತ್ತಿರುವಾಗ ಹುಡುಗಿ ಪ್ರವಾಹದಲ್ಲಿ ಹೋಗಿಬಿಟ್ಟಳು. ಲಲಿತೆಯೂ ಸುಬ್ಬಣ್ಣನೂ ಕತ್ತಲಲ್ಲಿ ಒಂಟಿಯಾಗಿ ಸಿಕ್ಕಿಕೊಂಡ ಮಕ್ಕಳಂತೆ ಎದೆಯೊಡೆದು ನಿಂತರು. ಲಲಿತೆ, ನಾನು ಪೂರ್ವಜನ್ಮದಲ್ಲಿ ಯಾವ ಪಾಪ ಮಾಡಿದ್ದೆನೋ ಇಂಥ ದುಃಖವನ್ನು ಅನುಭವಿಸುತ್ತಿದ್ದೇನೆ, ಈ ಜನ್ಮದಲ್ಲಿ ನಿಮ್ಮನ್ನು ನಿಮ್ಮ ತಂದೆತಾಯಿಗಳಿಂದ ಬಿಡಿಸಿಕೊಂಡು ಬಂದೆ, ಇದಕ್ಕೆ ಇನ್ನು ಯಾವ ಶಿಕ್ಷೆಯನ್ನು ಅನುಭವಿಸಬೇಕೋ, ಎಂದು ನದೀ ತೀರದಲ್ಲಿ ಕುಳಿತು ಅತ್ತಳು. ಸುಬ್ಬಣ್ಣನಿಗಾದರೆ ಯೋಚಿಸುವ ಶಕ್ತಿಯೇ ಹೋಗಿ ಬಿಟ್ಟಿತ್ತು. ಅವನು ಮಂಕನಂತೆ ಮಗಳ ಸಂಸ್ಕಾರಗಳನ್ನು ಮುಗಿಸಿ ಹೆಂಡತಿಯನ್ನು ಮನೆಗೆ ಕರೆತಂದನು.

ಈ ಶೋಕ ಪರಂಪರೆಯನ್ನು ವರ್ಣಿಸುವುದಕ್ಕೆ ನನಗೆ ದುಃಖವಾಗುತ್ತದೆ. ಆದರೆ ಇದನ್ನು ಬದಲಾಯಿಸುವುದಕ್ಕೆ ಇದೇನು ಕಟ್ಟುಕತೆಯಲ್ಲ. ನಡೆದದ್ದು ಹೀಗೆ. ಲಲಿತೆಗೆ ಅಂದಿನಿಂದ ಏನೋ ಕಾಯಿಲೆಗೆ ಆರಂಭವಾಯಿತು. ಅವಳು, ಊರಿಗೆ ಹೋದರೆ ಇದ್ದೀತು, ನಾನು ಈ ಊರಲ್ಲಿ ಇನ್ನಿರಲಾರೆ, ಎನ್ನುವಳು. ಸುಬ್ಬಣ್ಣ, ಬರುವಾಗ ಬಂದ ಹುಮ್ಮಸ್ಸೇನು, ಈಗ ಸೋತು ಹಿಂದಕ್ಕೆ ಹೋಗುವುದೆಂದರೇನು, ಅಲ್ಲಿ ಹೋಗಿ ಆಗತಕ್ಕದ್ದೇನು, ಇಲ್ಲೇ ಇರೋಣ, ಕಾಗೆ ಮಳೇಲಿ ನೆನೆದಹಾಗೆ ದುಃಖದಲ್ಲಿ ನೆನೆದದ್ದಾಯಿತು, ಎಲ್ಲೋ ಇದ್ದು ಕಣ್ಣುಮುಚ್ಚಿಕೊಳ್ಳುವುದು, ಎಂದನು. ಲಲಿತಮ್ಮ ಸುಮ್ಮನಾದಳು. ಗಂಡನೇ ದೇವರೆಂದ ತನಗೇಕೆ ಈ ಅಜ್ಞಾನವೆಂದು ಮತ್ತೆ ಗೌರೀ ಪೂಜೆ ವ್ರತಮಾಡಿಕೊಂಡು, ತಾಯಿ, ಎಲ್ಲಿಲ್ಲದ ದುಃಖವನ್ನು ನೋಡಿದ್ದಾಯಿತು, ಇವರನ್ನು ಸುಖವಾಗಿ ನೋಡಿಕೊ, ನನ್ನನ್ನು ಸುಮಂಗಲಿಯಾಗಿ ನಿನ್ನ ಪಾದಕ್ಕೆ ಸೇರಿಸಿಕೊ, ಆದರೆ ಒಂದು ಸಲ ಅಮ್ಮನನ್ನು ನೋಡುವ ಪುಣ್ಯ ನನಗೆ ಕೊಡು, ಎಂದು ಪ್ರಾರ್ಥಿಸಿದಳು.

ಆದರೆ ಆ ಪುಣ್ಯ ಒಂದು ಅವಳಿಗೆ ಲಭಿಸಲಿಲ್ಲ. ಮಿಕ್ಕದ್ದು ಲಭಿಸಿತು. ಕಾಯಿಲೆ ಹೆಚ್ಚಾಗಿ ಮೂರು ವರುಷ ಮಕ್ಕಳ ದುಃಖದಲ್ಲಿ ಕೊರಗಿ ಒಂದು ದಿನ ಅವಳು ಸರ್ವಮಂಗಳೆಯ ಪಾದಾರವಿಂದವನ್ನು ಸೇರಿದಳು.

ಸುಬ್ಬಣ್ಣನು ಕೊನೆಯ ತನಕ ಅವಳ ಬಳಿ ಕುಳಿತು ಅವಳನ್ನು ಎಳೆಯ ಮಗುವಿನಂತೆ ನೋಡಿಕೊಂಡನು. ಕೊನೆ ಕೊನೆಗೆ ಇವರು ಗಂಡ ಹೆಂಡತಿಯರಂತೆ ಮರ್ಯಾದೆಯಿಂದಿರುವುದನ್ನು ಬಿಟ್ಟರು. ಅಣ್ಣ ತಂಗಿಯರೋ ಎಂಬಂತೆ ಧಾರಾಳವಾದ ಒಂದು ವಿಚಿತ್ರ ಸ್ನೇಹದಿಂದಿದ್ದರು. ಇವರ ಮನಸ್ಸೆರಡೂ ಒಂದಾಯಿತು. ಲಲಿತೆ ಗಂಡನನ್ನು ಕುರಿತು ಯಾವಾಗಲೂ, ದೇವರು, ದೇವರ ಇಚ್ಛೆ, ದೇವರ ಕೆಲಸ, ಎಂದು ಹೇಳುತ್ತಿರುವಳು. ಸುಬ್ಬಣ್ಣನು ಹೆಂಡತಿಯ ಪಕ್ಕದಲ್ಲಿ ಕುಳಿತು ಯೋಚಿಸುತ್ತ "ಇವಳ ಜೀವ ಎಷ್ಟು ಸಂಸ್ಕಾರ ಪಡೆದದ್ದು. ನಾನು ಹಠವಾದಿ. ನನ್ನ ಹಠಕ್ಕಾಗಿ ನಾನು ಹೇಳಿದ್ದನ್ನೆಲ್ಲಾ ಮಾಡಿ ತಾನು ಎನ್ನುವುದನ್ನೇ ಮರೆತಳಲ್ಲಾ. ಈ ದೇವರ ಭಕ್ತಿ ಎಂಥದು" ಎಂದುಕೊಳ್ಳುವನು. ಕೊನೆಗೆ ಅವಳು ತನ್ನನ್ನು ತಿದ್ದುವುದಕ್ಕೆಂದು ಬಂದಿದ್ದ ದೇವಿಯ ಅವತಾರವೇ ಎಂದು ಅವನು ಭಾವಿಸಿಕೊಂಡನು. ಅವಳು ತೀರಿಹೋದಾಗ ಅವನು ಅಳಲಿಲ್ಲ. ಇದು ಸರಿ ಎಂದು ಅವಳಿಗೆ ಉತ್ತರಕ್ರಿಯೆಗಳನ್ನೆಲ್ಲಾ ಸಂಪೂರ್ಣವಾಗಿ ಮಾಡಿ ತಾನು ಇನ್ನೇನು ಮಾಡುವುದು ಎಂದು ಯೋಚಿಸಿ ಅವಳು ಅಂಥ ನಂಬಿಕೆಯನ್ನಿಟ್ಟಿದ್ದ ದೇವರಲ್ಲಿ ತನಗೂ ಭಕ್ತಿ ಉಂಟಾಗುವುದಾದರೆ ಆಗಲೆಂದು ಪುಣ್ಯಸ್ಥಳಗಳಿಗೆಲ್ಲ ಒಂದು ಸಲ ಯಾತ್ರೆ ಹೋಗಿ ಬಂದನು.

೬

ನಾವು ಹುಟ್ಟುವುದು ಏಕೆ? ಬಾಳುವುದು ಹೇಗೆ? ಎಲ್ಲಿಂದ ಬರುತ್ತೇವೆ? ಎಲ್ಲಿಗೆ ಹೊರಟಿದೇವೆ? ಸಂಸಾರವೆಂಬ ಸಾಗರದಲ್ಲಿ ಮಲೆತು ಮೇಲೆ ಬರುವ ಅಲೆಯ ನೀರಿನ ದಿಬ್ಬವನ್ನು ಹಿಮಾಲಯವೆಂದೇ ಭ್ರಮಿಸಿ ಭೀತಿಪಡುವೆವೇಕೆ? ಕಷ್ಟವೆನ್ನುವುದು ಬರಿಯ ಭ್ರಮೆಯ ಭೀತಿಯಾದರೆ ನಿಜ ಯಾವುದು? ಸುಖ ನಿಜವೆ? ಸಂತೋಷ ನಿಜವೆ? ಸುಬ್ಬಣ್ಣನಿಗೆ ಈಗ್ಗೆ ಸುಮಾರು ಅರುವತ್ತು ವರುಷ ವಯಸ್ಸಾಗಿತ್ತು. ಒಬ್ಬರೇ ಯಾತ್ರೆ

ಹೋಗಿ ಬೇರೆ ಬೇರೆ ಸ್ಥಳಗಳಲ್ಲಿ ದೇವರ ಸೇವೆಯನ್ನು ಮಾಡಿಕೊಂಡು ಕಲಿಕತ್ತೆಗೆ ಬರುವ ವೇಳೆಗೆ ಅವರು ಈ ಯೋಚನೆಗಳನ್ನು ಮತ್ತೆ ಮತ್ತೆ ಮಾಡಿ ಇದಕ್ಕೆ ಉತ್ತರ ತೋರದೆ ಜೀವನವೆನ್ನುವುದು ಸಭಿಕರಿಗೆ ವೇಷ ಹಾಕಿ ಕುಣಿಸುವ ಬಯಲುನಾಟಕ ಎಂದುಕೊಂಡರು. ಅವರಿಗೆ ತಾವು ಮೈಸೂರಿನಲ್ಲಿ ಅಸಹ್ಯಪಟ್ಟುಕೊಂಡು ಬಂದದ್ದು, ಕಲಿಕತ್ತೆಯಲ್ಲಿ ಸಂಸಾರ ಮಾಡಿದ್ದು, ಇದೆಲ್ಲ ಮಕ್ಕಳ ಆಟದಂತೆ ತೋರಬಂದಿತು. ಎಂದರೆ ತನ್ನ ಪರವಾಗಿ ಮಾತ್ರ. ತಾವು ಲಲಿತೆಯನ್ನು ನೋಡಿದ್ದು ತಮ್ಮ ಜನ್ಮದ ದೊಡ್ಡ ಪುಣ್ಯವೆಂದು ಅವರು ಎಣಿಸಿದರು. ಅವಳು ಜೀವನದಲ್ಲಿ ತೋರಿಸಿದ ಸಹನವನ್ನು ತಾನು ತೋರಿಸಲಿಲ್ಲವಲ್ಲಾ ಎಂದು ವ್ಯಸನಪಟ್ಟರು. ತಾವು ತಾಯಿ ತಂದೆಗಳನ್ನು ಬಿಟ್ಟುಬಂದದ್ದು ತಪ್ಪು ಕೆಲಸ. ತಮ್ಮ ಮಗನೂ ಮಗಳೂ ಹೋದಾಗ ತಮಗೆಷ್ಟು ಖೇದವಾಯಿತೋ ತಾವು ಬಂದುಬಿಟ್ಟಾಗ ತಮ್ಮ ತಾಯಿತಂದೆಗಳಿಗೆ ಅಷ್ಟು ಖೇದವಾಗಿರಬೇಕಲ್ಲವೆ? ಒಟ್ಟಿನಲ್ಲಿ ತಾವು ತಮ್ಮ ಮೂಗಿನ ನೇರಕ್ಕೆ ನಡೆದಂತೆ ಆಯಿತೇ ಹೊರತು, ಇತರರ ಕಷ್ಟಸುಖವನ್ನು ಯೋಚಿಸಿ ನಡೆದುಕೊಂಡಹಾಗಾಗಲಿಲ್ಲ. ಹೀಗೆಲ್ಲಾ ಯೋಚಿಸುತ್ತಾ ಯಾತ್ರೆಯನ್ನು ಮುಗಿಸಿಕೊಂಡು ಸುಬ್ಬಣ್ಣ ಕಲಿಕತ್ತೆಗೆ ಬಂದರು. ಅಲ್ಲಿ ಮಗನ ಜ್ಞಾಪಕವೂ ಹೆಂಡತಿಯ ಜ್ಞಾಪಕವೂ ಮತ್ತೆ ಬಲವಾದುವು. ತಾವು ಮಾಡಿದ್ದು ತಪ್ಪು ಅಲ್ಲ. ಆ ಹುಡುಗ ಅಷ್ಟು ಚಿಕ್ಕ ವಯಸ್ಸಿನಲ್ಲಿ ತೀರಿಹೋದನಲ್ಲಾ. ಅವನು ಮೈಸೂರಿನಲ್ಲಿದ್ದಿದ್ದರೆ ಎಷ್ಟರ ಮಟ್ಟಿಗೆ ಸುಖಪಡುತ್ತಿದ್ದನು? ಬಂದಿಷ್ಟು ಮೊಸರನ್ನು ಹಾಕುವುದಕ್ಕೆ ಮನೆಯಲ್ಲಿ ಅವಕಾಶವಿರಲಿಲ್ಲ. ಆ ಹೆಂಡತಿಯು ಏನು ಸುಖಪಡುತ್ತಿದ್ದಳು? ದಿನವೂ ಮಾತು ಕೇಳುತ್ತಿದ್ದಳು. ಇದನ್ನು ಯೋಚಿಸಿ ಸುಬ್ಬಣ್ಣ ತಾವು ಮಾಡಿದ್ದೇ ಸರಿ ಎಂದುಕೊಂಡರು. ಪರದೇಶಕ್ಕೆ ಬಂದರೇನು? ತಾವು ಕೆಟ್ಟವರಾದರೇನು? ಆ ಹೆಂಡತಿಯೂ ಆ ಮಗನೂ ಇದ್ದಷ್ಟು ದಿನ ಸುಖವಾಗಿದ್ದು ಹೋದರು; ಇನ್ನು ತನ್ನ ಪಾಡು ಏತಕ್ಕೆ? ತಾವು ಒಳ್ಳೆಯವರಾಗದಿದ್ದರೆ ಏನು? ಎಲ್ಲೋ ಹೇಗೋ ದಿನ ಕಳೆಯುವುದು: ಎಂದು ಯೋಚಿಸಿಕೊಂಡರು. ಮನೆಯನ್ನೆಲ್ಲ ನೋಡಲು ಅವರಿಗೆ ಹೊಟ್ಟೆಯಲ್ಲಿ ಬೆಂಕಿ ಹಾಕಿದ ಹಾಗಾಯಿತು. ಯಾರನ್ನು ಚೆನ್ನಾಗಿ ಸಾಕುವುದಕ್ಕೆಂದು ಇಲ್ಲಿಗೆ ಓಡಿಬಂದದ್ದಾಯಿತೋ

ಆ ಮಗನು ಹೋದನು. ಯಾರಿಗಾಗಿ ಒಂದು ಒಳ್ಳೆಯ ಸಂಸಾರವನ್ನು ಕಟ್ಟುವುದಕ್ಕೆ ಇಲ್ಲಿ ಪ್ರಯತ್ನಮಾಡಿದ್ದಾಯಿತೋ ಆ ಹೆಂಡತಿ ಹೋದಳು. ಅವರೊಂದಿಗೆ ಮಕ್ಕಳಾಟದ ಗುಬ್ಬಚ್ಚಿಯ ಗೂಡಿನಂತೆ ಆ ಆಸೆಯೆಲ್ಲ ಕರಗಿಹೋಯಿತು. ನಮಗೆ ದೇವರ ಸಾನ್ನಿಧ್ಯದಲ್ಲಿ ಬರುವ ಶಾಂತಿಯು ಸಂಸಾರದ ಆವರಣಕ್ಕೆ ಬಂದಾಗ ಇರುವುದಿಲ್ಲ. ಸುಬ್ಬಣ್ಣನವರು ತಮ್ಮ ಸಂಪಾದನೆಯಿಂದ ಮೊದಲು ತಾವು ಬಾಡಿಗೆಗೆ ತೆಗೆದುಕೊಂಡಿದ್ದ ಮನೆ ಯನ್ನು ಕೊಂಡುಕೊಂಡಿದ್ದರು. ಆಗಾಗ ಸಂಸಾರಕ್ಕಾಗಿ ಕೆಲವು ಸಾಮಾನು ಗಳನ್ನು ತೆಗೆದುಕೊಂಡಿದ್ದರು. ಮಗನಿಗೆ ಬೇಕಾದ ಬಟ್ಟೆ ಮುಂತಾದ್ದನ್ನು ತೆಗೆದುಕೊಟ್ಟಿದ್ದರು. ಮಗ ಹೋದಮೇಲೆ ಲಲಿತಮ್ಮ ಅದನ್ನೆಲ್ಲಾ ಒಂದು ಪೆಟ್ಟಿಗೆಯಲ್ಲಿ ಹಾಕಿ ಇರಿಸಿದ್ದಳು. ಹುಡುಗಿಗೆ ತೆಗೆದಿದ್ದ ಬಟ್ಟೆ ಬರೆಯನ್ನೂ ಒಡವೆತೊಡವುಗಳನ್ನೂ ಇನ್ನೊಂದು ಪೆಟ್ಟಿಗೆಯಲ್ಲಿ ಹಾಕಿ ಟ್ಟಿದ್ದಳು. ಇನ್ನು ಅವಳ ಸಾಮಾನು ಬೇರೆ. ಸುಬ್ಬಣ್ಣನವರು ಸಾಮಾನೆಲ್ಲ ವನ್ನೂ ನೋಡಿದರು. ಪೆಟ್ಟಿಗೆಗಳನ್ನು ತೆಗೆದು ಮಕ್ಕಳ ಬಟ್ಟೆ ಬರೆಯನ್ನು ನೋಡಿದರು. ತಾವು ಕಳೆದುಕೊಂಡ ಸೌಖ್ಯವೆಂಥದೆಂದು ಮತ್ತೆ ಮತ್ತೆ ಧ್ಯಾನಮಾಡಿ ಜೀವನದಲ್ಲಿ ಬಹಳ ಬೇಸರವನ್ನು ಪಡೆದರು. ಕೊನೆಗೆ ಈ ಹಾಳು ಕೊಂಪೆಯಲ್ಲಿ ನಾನು ಇರಲಾರೆ ಎಂದುಕೊಂಡು, ತಮ್ಮ ಹತ್ತಿರ ಪಾಠ ಹೇಳಿಸಿಕೊಳ್ಳುತ್ತಿದ್ದವರನ್ನು ಕರೆದು ಅವರಿಗೆ, ನಾನು ಊರಿಗೆ ಹೋಗುತ್ತೇನೆ, ನಿಮಗೆ ಬೇಕಾದದ್ದನ್ನು ತೆಗೆದುಕೊಳ್ಳಿ ಎಂದು ಹೇಳಿದರು. ಅವರು ತೆಗೆದುಕೊಂಡು ಮಿಕ್ಕದ್ದನ್ನೆಲ್ಲ ಬಡಬಗ್ಗರನ್ನು ಕರೆದು ಎಲ್ಲರಿಗೂ ಕೊಟ್ಟು ಮನೆಯನ್ನು ಆ ಬೀದಿಯಲ್ಲಿದ್ದ ಒಂದು ಭಜನೆಯ ಕೂಟದವರಿಗೆ ದಾನಮಾಡಿ ತಾವು ಬಹಳ ದಿನದಿಂದ ನುಡಿಸುತ್ತಿದ್ದ ಪಿಟೀಲನ್ನೂ ಸ್ವಲ್ಪ ಹಣವನ್ನೂ ತೆಗೆದುಕೊಂಡು ಕಲಿಕತ್ತೆಯನ್ನು ಬಿಟ್ಟು ಹೊರಟರು.

ಇದಿಷ್ಟನ್ನು ಮಾಡುವ ಸಂಭ್ರಮದಲ್ಲಿ ಎಲ್ಲಿಗೆ ಹೋಗುವುದೆಂದು ಅವರು ಯೋಚನೆಮಾಡಲಿಲ್ಲ. ರೈಲ್ವೆ ಸ್ಟೇಷನಿಗೆ ಬಂದು ತನ್ನ ಕೈಯಲ್ಲಿದ್ದ ಹಣವನ್ನೆಲ್ಲಾ ಸ್ಟೇಷನ್ ಮೇಷ್ಟರಿಗೆ ಕೊಟ್ಟು ಒಂದು ಟಿಕೇಟು ಕೊಡಿ ಎಂದರು. ಅವನು ಎಲ್ಲಿಗೆ ಎಂದನು. ಸುಬ್ಬಣ್ಣ: ''ಎಲ್ಲಿಗಾದರೂ.'' ಸ್ಟೇಷನಿ ನವನು: ''ಎಲ್ಲಿಗಾದರೂ ಎಂದರೆ ಎಲ್ಲಿಗೆ ಕೊಡುವುದು.'' ಸುಬ್ಬಣ್ಣನವರಿಗೆ

ತಮ್ಮ ಅವಸ್ಥೆಯನ್ನು ನೆನೆದುಕೊಂಡು ಸ್ವಲ್ಪ ಕೋಪ ಬಂದಿತು, ಸ್ವಲ್ಪ ನಗು ಬಂದಿತು. ಅವರು ಸ್ಟೇಷನ್ ಮೇಷ್ಟರನ್ನು ಕುರಿತು "ಸ್ವಾಮಿ, ಇಂಥ ಊರಿಗೆ ಟಿಕೇಟು ಕೊಡಿ ಎಂದರೆ ಇದೆಯೋ ಇಲ್ಲವೋ ನೋಡಬೇಕು. ಎಲ್ಲಿಗಾದರೂ ಕೊಡಿ ಎಂದರೆ ನಿಮಗೇನು ಕಷ್ಟ? ನಿಮ್ಮ ಕೈಲಿರುವ ರೂಪಾಯಿಗೆ ಎಲ್ಲಿಯವರೆಗೆ ಹೋಗಬಹುದೋ ಅಲ್ಲಿಯವರೆಗೆ ಟಿಕೇಟು ಕೊಡಿ" ಎಂದರು. ಸ್ಟೇಷನ್ ಮೇಷ್ಟರು ಇವರ ಮುಖವನ್ನು ನೋಡಿ ಏನು ಹುಚ್ಚನಾಗಿದ್ದಾನೆ ಎಂದುಕೊಂಡು ದಕ್ಷಿಣ ದೇಶದವನಾಗಿ ಕಂಡದ್ದರಿಂದ ಅವರಿಗೆ ಬೊಂಬಾಯಿಯವರೆಗೆ ಒಂದು ಟಿಕೇಟನ್ನು ಕೊಟ್ಟು, ಮೂರು ರೂಪಾಯಿ ಚಿಲ್ಲರೆ ವಾಪಸು ಕೊಟ್ಟನು. ಅದನ್ನು ತೆಗೆದುಕೊಂಡು ಸುಬ್ಬಣ್ಣನವರು ರೈಲು ಹತ್ತಿದರು. ಟಿಕೇಟು ಯಾವ ಊರಿಗೆ ಎಂದು ಕೂಡ ನೋಡಲಿಲ್ಲ.

೭

ನಾಲ್ಕೈದು ದಿನ ರೈಲು ಪ್ರಯಾಣ ಮುಗಿಸಿಕೊಂಡು ಅವರು ಬೊಂಬಾಯಿಗೆ ಬಂದು ಸೇರಿದರು. ಸೇರಿದಾಗ ಟಿಕೇಟನ್ನು ರೈಲಿನವರು ತೆಗೆದುಕೊಂಡರು. ಪ್ರಯಾಣ ಇಲ್ಲಿಗೆ ಮುಗಿಯಿತೆಂದು, ಸುಬ್ಬಣ್ಣ ಇದು ಯಾವ ಊರೆಂದು ಕೇಳಿದರು. ಜನ ಬೊಂಬಾಯಿ ಎಂದು ಹೇಳಿದರು. ಯಾವ ಊರಾದರೇನು ಎಂದು ಸುಬ್ಬಣ್ಣ ಊರೊಳಕ್ಕೆ ಹೊಕ್ಕರು. ಸ್ಟೇಷನ್ ಮೇಷ್ಟರು ಕೊಟ್ಟಿದ್ದ ಹಣದಲ್ಲಿ ಅವರು ದಾರಿಯಲ್ಲಿ ಖರ್ಚುಮಾಡಿದ್ದು ಹೋಗುತ್ತಾ ಒಂದೂವರೆ ರೂಪಾಯಿಯಷ್ಟು ಉಳಿದಿತ್ತು. ಯಾವುದೋ ಒಂದು ಬೀದಿಯಲ್ಲಿ ಸ್ವಲ್ಪ ಮಿಠಾಯಿ ಕೊಂಡುಕೊಂಡು ಅಲ್ಲಿ ಒಂದು ದೇವಸ್ಥಾನದ ಮುಂದುಗಡೆ ಕುಳಿತು ಸಮಯ ನೋಡಿ ಹತ್ತಿರದ ನಲ್ಲಿಯ ಬಳಿ ಸ್ನಾನ ಮಾಡಿಕೊಂಡು ಅದನ್ನು ತಿಂದರು. ಪ್ರಯಾಣದಲ್ಲಿ ಯಾವ ಯೋಚನೆಯನ್ನೂ ಹಚ್ಚಿಕೊಳ್ಳದೆ ಬರುತ್ತಾ, ತಾವು ಹೆಂಡತಿ ಮಕ್ಕಳಿಗಾಗಿ ಅಷ್ಟು ಖೇದಪಟ್ಟದ್ದು ತಪ್ಪು ಎಂದೂ, ಇನ್ನು ಮೇಲೆ ಯಾವುದನ್ನೂ ಅಷ್ಟು ಹಚ್ಚಿಕೊಳ್ಳಬಾರದೆಂದೂ, ಅದೇ ನಿಜವಾದ ಸುಖಕ್ಕೆ ದಾರಿಯೆಂದೂ ಅವರು ನಿರ್ಧರಿಸಿದ್ದರು. ಕಟ್ಟಿಕೊಂಡವರಿಗೆ ಬಿಟ್ಟ ದುಃಖ ತಪ್ಪಿದ್ದಲ್ಲ. ಬಿಟ್ಟೇ ಇರುವವನಿಗೆ ದುಃಖವೇ ಇಲ್ಲ. ಇದೇನು ಹೊಸದಲ್ಲ. ಗೀತೆಯಲ್ಲಿ

ಹೇಳಿರುವ ತತ್ತ್ವವೂ ಇದೇ. ಇದನ್ನು ಸುಬ್ಬಣ್ಣನವರು ಈ ಮೊದಲು ಕೇಳಿ ತಿಳಿದಿದ್ದರು. ಈಗ ಅನುಭವಿಸಿ ತಿಳಿದರು. ಹಿಂದೆ ಏನೋ ತಿಳಿಯದೆ ಇದು ತನ್ನದು ಇದು ನನ್ನದು ಎಂದು ಭಾವಿಸಿ ಕಷ್ಟಕ್ಕೆ ಸಿಕ್ಕಿದ್ದಾಯಿತು, ಇನ್ನು ಅದೇ ತಪ್ಪನ್ನು ಮಾಡಬಾರದು, ಕೇವಲ ಸಂನ್ಯಾಸಿಯಂತೆ ಇರಬೇಕು, ಎಂದು ನಿರ್ಧರಿಸಿಕೊಂಡರು. ಕೈಯಲ್ಲಿದ್ದ ಒಂದೂವರೆ ರೂಪಾಯಿ ನಾಲ್ಕು ದಿನದಲ್ಲಿ ಖರ್ಚಾಯಿತು. ಐದನೆಯ ದಿನ ಮಿಠಾಯಿ ಗಾಗಿ ಕಾಸು ಸಂಪಾದಿಸುವುದಕ್ಕೆ ಏನು ಮಾಡುವುದೆಂದು ಯೋಚಿಸಿ ಇದಕ್ಕೆ ಮೋಸವೇನು ಮರ್ಯಾದೆ ಏನು ಎಂದು ಒಬ್ಬ ಮಿಠಾಯಿ ಅಂಗಡಿಯ ಮುದುಕಿಯ ಹತ್ತಿರ ಹೋಗಿ ಪಿಟೀಲನ್ನು ಬಾರಿಸುತ್ತಾ ಕುಳಿತರು. ಜನ ಅಲ್ಲಿ ಇಲ್ಲಿ ಹೋಗುವವರು ಒಂದು ಸ್ವಲ್ಪ ಹೊತ್ತು ಕೇಳುತ್ತಾ ನಿಂತರು. ಇದರಿಂದ ಮುದುಕಿಗೆ ವ್ಯಾಪಾರ ಚೆನ್ನಾಗಿ ಆಯಿತು. ಕೊನೆಗೆ ಮುದುಕಿ, ಅಪ್ಪಾ ನಿನ್ನಿಂದ ನನಗೆ ವ್ಯಾಪಾರ ಆಯಿತು, ಏನಾದರೂ ಕೊಡುತ್ತೇನೆ ತೆಗೆದುಕೊ ಎಂದಳು. ಸುಬ್ಬಣ್ಣನವರು, ನನಗೇನೂ ಬೇಡ, ನನಗೆ ಒಂದು ಊಟದ ಮಿಠಾಯಿ ಕೊಡು ಅಷ್ಟೇ, ಎಂದರು. ಮುದುಕಿ ಅಗತ್ಯವಾಗಿ ಆಗಲಿ ಎಂದು ಅವರು ತೆಗೆದುಕೊಳ್ಳುವಷ್ಟು ಮಿಠಾಯಿ ಕೊಟ್ಟು, ದಿನಾ ಬರುವುದಾದರೆ ಬಾ, ಮಿಠಾಯಿ ನಿನಗೆ ಬೇಕಾದಷ್ಟು ಕೊಡುತ್ತೇನೆ ಎಂದಳು. ಸುಬ್ಬಣ್ಣನವರು ಈ ಏರ್ಪಾಡಿಗೆ ಒಪ್ಪಿದರು. ಈ ರೀತಿಯಾಗಿ ಹದಿನೈದು ದಿನ ಇವರು ಮಿಠಾಯಿ ಅಂಗಡಿಯ ಹತ್ತಿರ ಪಿಟೀಲು ಬಾರಿಸು ವುದು ಆ ಮುದುಕಿ ಇವರಿಗೆ ಮಿಠಾಯಿ ಕೊಡುವುದು ಹೀಗೆ ನಡೆ ಯಿತು. ಕೊನೆಯ ದಿನ ಮುದುಕಿಯ ಅಂಗಡಿಯ ಬಳಿ ಇವರು ಪಿಟೀಲನ್ನು ಬಾರಿಸುತ್ತಿರುವಾಗ ಒಂದು ಗಾಡಿ ಬಂದು ಅಂಗಡಿಯ ಬಳಿ ನಿಂತಿತು. ಅದರಲ್ಲಿ ಒಬ್ಬ ದೊಡ್ಡಮನುಷ್ಯನು ಕುಳಿತಿದ್ದನು. ಅವನ ಕೈಯಲ್ಲಿದ್ದ ವಜ್ರದ ಉಂಗುರವೇ ಸಾವಿರಾರು ರೂಪಾಯಿಗಳು ಬಾಳಬಹುದಾಗಿತ್ತು. ಇಂಥಾ ಸಾಹುಕಾರನ ಗಾಡಿ ಹತ್ತಿರ ನಿಂತದ್ದನ್ನು ನೋಡಿ ಸೇರಿದ್ದ ಗುಂಪು ಅವನಿಗೆ ದಾರಿಬಿಟ್ಟು ನಿಂತಿತು. ಸಾಹುಕಾರನು ಐದು ನಿಮಿಷ ಗಾಡಿಯಲ್ಲಿ ಕುಳಿತಿದ್ದ ಹಾಗೆಯೇ ಈ ಪಿಟೀಲನ್ನು ಕೇಳಿ ಗಾಡಿಯಿಂದ ಇಳಿದು ಬಂದು ಮುದುಕಿಯನ್ನು ಕುರಿತು "ಈತನು ಯಾರು? ನಿನಗೇ

ನಾಗಬೇಕು?'' ಎಂದನು. ಅವಳು ''ಯಾರೋ ತಿಳಿಯದು. ದಿನಾ ಬಂದು ಇಲ್ಲಿ ಪಿಟೀಲನ್ನು ನುಡಿಸುತ್ತಾನೆ. ನಾನು ಅವನಿಗೆ ಮಿಠಾಯಿ ಕೊಡುತ್ತೇನೆ'' ಎಂದಳು. ಆ ರಾಗ ಮುಗಿದ ಮೇಲೆ ಸಾಹುಕಾರನು ಸುಬ್ಬಣ್ಣನನ್ನು ''ಅಣ್ಣಾ ನಿಮ್ಮದು ಯಾವ ಊರು'' ಎಂದು ಕೇಳಿದನು. ಸುಬ್ಬಣ್ಣನವರಿಗೆ ತಮ್ಮ ಸಂಗೀತದ ಸುಖದಲ್ಲಿ ಯಾವ ಮಾತನ್ನೂ ಆಡುವ ಇಷ್ಟವಿರಲಿಲ್ಲ. ಅವರು ಮತ್ತೆ ಅದೇ ರಾಗದಲ್ಲಿ ಗೀತಗೋವಿಂದದ ಗೀತೆಯೊಂದನ್ನು ಸೊಗಸಾಗಿ ನುಡಿಸುತ್ತಾ ಗಾನದಲ್ಲಿ ಮಗ್ನವಾಗಿಹೋದರು. ಸಾಹುಕಾರನು ಆನಂದದಿಂದ ಪರವಶನಾದನು. ಅದು ಮುಗಿದ ಮೇಲೆ ಸುಬ್ಬಣ್ಣನನ್ನು ಗಟ್ಟಿಯಾಗಿ ಕರೆದು ''ಅಣ್ಣಾ ನೀವು ನನ್ನ ಜೊತೆಗೆ ಬರುತ್ತೀರಾ? ಸ್ವಲ್ಪ ಸಂಗೀತ ಕೇಳಬೇಕು'' ಎಂದನು. ಸುಬ್ಬಣ್ಣನವರಿಗೆ ಮೊದಲು ಸ್ವಲ್ಪ ಕೋಪ ಬಂದಿತು. ಅವರು ತಾವಾಗಿ ಹೋಗಿ ದಿಕ್ಕಿಲ್ಲದ ಮುದುಕಿಯ ಅಂಗಡಿಯ ಬಳಿ ಹಾಡಿದ್ದು ತಾವು ಅವಳಿಗೆ ಉಪಕಾರ ಮಾಡಿದಂತೆಯೂ ಆಯಿತೆಂದು ಎಣಿಸಿದ್ದರು. ಅದರಲ್ಲಿ ಅವರಿಗೆ ಅವಮಾನವೇನೂ ಇಲ್ಲ. ಈ ಸಾಹುಕಾರ ಬಂದು ತನ್ನನ್ನು ಕೇಳಿದದಕ್ಕೆ, ಇವನು ಬಹಳ ದೊಡ್ಡಮನುಷ್ಯ, ತಾನು ಬೀದೀ ಪಿಟೀಲಿನವನು ಎಂದು ಕೊಂಡಿದಾನೆಯೋ ಏನೋ, ಎಂದು ಸ್ವಲ್ಪ ಅಸಮಾಧಾನಪಟ್ಟರು. ಆದರೆ ಒಡನೆಯೇ, ನನಗೇನು ಜಂಭ, ಹಿಂದೆ ಪಾಠ ಹೇಳಿ ಕಾಸು ಸಂಪಾದಿಸಲಿಲ್ಲವೆ? ಈಗ ಇವನ ಹತ್ತಿರ ನುಡಿಸುವುದಕ್ಕೆ ಏನು ಅಡ್ಡಿ? ಎಂದುಕೊಂಡು ಆಗಲಿ ಬರುತ್ತೇನೆ ಎಂದೆದ್ದು ಹೊರಟರು. ಮಿಠಾಯಿ ಅಂಗಡಿಯ ಮುದುಕಿ ಎಂದಿನಂತೆ ಮಿಠಾಯಿ ಕೊಡುವುದಕ್ಕೆ ಬಂದಳು. ಸಾಹುಕಾರನು ಅದೇನೂ ಬೇಡ, ನಾನು ಎಲ್ಲಾ ಕೊಡುತ್ತೇನೆ, ಎಂದನು. ಅವಳು ಸುಬ್ಬಣ್ಣನವರಿಗೆ, ಹೋಗಲಿ ಈ ಹಣ ಇಟ್ಟುಕೊಂಡಿರು, ಎಂದು ಐದು ರೂಪಾಯಿಗಳನ್ನು ಕೊಡುವುದಕ್ಕೆ ಬಂದಳು. ಸುಬ್ಬಣ್ಣನವರು ನನಗೆ ಹಣವೇಕೆ? ಬೇಡ ಎಂದರು. ಮುದುಕಿ ''ನಿನಗೆ ತಿಳಿಯದು. ನೀನು ಪರಸ್ಥಳದವನಂತೆ ಇದ್ದೀಯೆ. ಇಲ್ಲಿ ನೀನು ತಲೆನೋವು ಮೂಗುನೋವು ಎಂದರೆ ನಿನ್ನನ್ನು ಕೇಳುವವರಾರು? ಕೆಟ್ಟ ಮಾತಾಡಬಾರದು. ಸತ್ತು ಹೋದರೆ ಹೆಣ ನಾಯಿ ಪಾಲಾಗುತ್ತದೆಯಲ್ಲ. ಪರದೇಶದಲ್ಲಿರುವವನು

ಕೈಯಲ್ಲಿ ಕಾಸು ಇಟ್ಟುಕೊಂಡಿರಬೇಕು. ತಿಳಿದ ಇಬ್ಬರು ಸ್ನೇಹಿತರನ್ನು ಮಾಡಿಕೊಳ್ಳಬೇಕು'' ಎಂದಳು. ಸುಬ್ಬಣ್ಣನವರು ''ಈ ಹಣ ನಿನ್ನಲ್ಲೇ ಇರಲಿ. ನನಗೆ ಬೇಕಾದಾಗ ಬಂದು ತೆಗೆದುಕೊಂಡು ಹೋಗುತ್ತೇನೆ'' ಎಂದರು. ಅವರೂ ಸಾಹುಕಾರನೂ ಹೊರಟುಹೋದರು.

ಸಾಹುಕಾರನ ಮನೆ ಅರಮನೆಯಂತಿತ್ತು. ಅವನಿಗೆ ಒಬ್ಬ ವಯಸ್ಸಾದ ತಾಯಿ, ಒಬ್ಬ ಹೆಂಡತಿ, ಒಬ್ಬಳೇ ಮಗಳು; ಪರಿವಾರ ಬಹಳ ಇತ್ತು. ಸಾಹುಕಾರನು ಆ ದೊಡ್ಡ ಮನೆಯಲ್ಲಿ ಬೀದಿಯ ಕಡೆಯ ಒಂದು ಕೊಠಡಿಯನ್ನು ಸುಬ್ಬಣ್ಣನವರಿಗೆ ತೋರಿಸಿ ನೀವು ಬೇಕಾದರೆ ಇಲ್ಲಿಯೇ ಇರಿ ಎಂಬುದಾಗಿ ಹೇಳಿದನು. ಅವನು ಸುಬ್ಬಣ್ಣನವರಿಗೆ ನೇಮಿಸಿದ ಕೆಲಸ ವೆಲ್ಲಾ ಇಷ್ಟೆ. ಅವರು ಇಷ್ಟ ಬಂದಾಗ ಪಿಟೀಲನ್ನು ಬಾರಿಸಬಹುದು. ಸುಬ್ಬಣ್ಣನವರಿಗೆ ಈ ರೀತಿ ದೊಡ್ಡ ಮನೆಯಾಗಲಿ, ಈ ಐಶ್ವರ್ಯವಾಗಲಿ ಹೊಸತಲ್ಲ. ಇಂತಹುದನ್ನು ಅವರು ಬಹಳ ನೋಡಿದ್ದರು. ಅದರಲ್ಲಿ ಅವರಿಗೆ ಬೇಸರ. ಇಷ್ಟು ಹಣವಿರುವ ಮನುಷ್ಯರು ಸಾಮಾನ್ಯವಾಗಿ ತಾವು ಬೇರೆಯ ಜಾತಿಯ ಮನುಷ್ಯರಂತೆ ಮಾತನಾಡುವರು. ಎಲ್ಲಿಲ್ಲದ ಧೋರಣೆಯನ್ನೂ ತೋರುವರು. ಅವರು ಸಾಹುಕಾರನಿಗೆ ''ಅಪ್ಪಾ, ನಾನು ನಿಮ್ಮಲ್ಲಿಯೇ ನಿಲ್ಲುವುದಿಲ್ಲ. ನಾನು ಪರದೇಶಿ. ಈಗ ಗೀತ ಗೋವಿಂದವನ್ನು ಬಾರಿಸುತ್ತೇನೆ. ಕೇಳಿ. ಇನ್ನು ಯಾವಾಗಲಾದರೂ ಬಾ ಎಂದರೆ ಬರುತ್ತೇನೆ. ಆಗ ಕೇಳಿ'' ಎಂದರು. ಸಾಹುಕಾರನು ಕುಳಿತುಕೊಂಡು ಈಗಲೇ ಬಾರಿಸು ಎಂದನು. ಸುಬ್ಬಣ್ಣನವರು ''ಸಾವಿರಹೇ ತವ ದೀನಾ'' ಎಂಬ ಗೀತವನ್ನು ಬಾರಿಸಿದರು.

ಸುಬ್ಬಣ್ಣನವರು ಪಿಟೀಲು ನುಡಿಸುವುದರ ಸೊಗಸು ಹೀಗೆಂದು ನಾನು ಹೇಳಲಾರೆ. ಅವರು ತೊರೆಯುವುರದಲ್ಲಿ ದೇವಸ್ಥಾನದಲ್ಲಿ ನುಡಿಸು ವಾಗ ಅದನ್ನು ನಾನು ಕೇಳಿದ್ದೇನೆ. ಇತರರು ಪಿಟೀಲು ಬಾರಿಸುವುದನ್ನೂ ಕೇಳಿದ್ದೇನೆ. ಎರಡಕ್ಕೂ ವ್ಯತ್ಯಾಸವನ್ನು ಒಂದು ಮಾತಿನಲ್ಲಿ ಹೇಳಬಹುದು. ಅವರು ನುಡಿಸುವುದು ಆಪ್ತನಲ್ಲಿ ಹೇಳುವ ಮನಸ್ಸಿನೊಳಗಣ ಮಾತಿನಂತೆ; ಇತರರು ಬಾರಿಸುವುದು ಸಭೆಯಲ್ಲಿ ಕೊಡುವ ಉಪನ್ಯಾಸದಂತೆ. ಇತರರು ಪಿಟೀಲನ್ನು ತಮ್ಮ ಕೌಶಲವನ್ನು ತೋರಿಸುವುದಕ್ಕಾಗಿ ಇರುವ ಒಂದು

ಸಾಧನವೆಂಬಂತೆ ಉಪಯೋಗಿಸುವರು. ಇವರು ಅದು ತಮ್ಮ ದೇಹದ ಹೊರಗಣ ಧ್ವನಿಯೆಂಬಂತೆ ಉಪಯೋಗಿಸುವರು. ಸ್ವಾರಸ್ಯ ಹುಟ್ಟಿದಾಗ ಇವರು ನುಡಿಸುವ ರೀತಿಯಲ್ಲಂತೂ ನಮಗೆ ಆ ಪಿಟೀಲು ಬೇರೆಯ ವಸ್ತು, ಅದನ್ನು ಇವರು ಹಿಡಿದುಕೊಂಡು ಕೈಯಿಂದ ನುಡಿಸುತ್ತಿದ್ದಾರೆ, ಎಂಬ ಭಾವನೆಯೇ ಬರುತ್ತಿರಲಿಲ್ಲ. ಇತರರು ಸ್ವರವನ್ನು ಹುಡುಕಿಕೊಂಡು ಹೋಗುವರು. ಇವರನ್ನು ಸ್ವರ ತಾನೇ ಹುಡುಕಿಕೊಂಡು ಬರುವಂತಿತ್ತು. ಅವರ ಮುಖದಮೇಲೆ ಒಂದು ಭಾವವು ಕಾಣುತ್ತಿರುವುದು; ಪಿಟೀಲಿನಲ್ಲಿ ಆ ಭಾವವು ಹೊರಹೊಮ್ಮುತ್ತಿರುವುದು. 'ರಾಧೆ ನಿನ್ನ ವಿರಹದಿಂದ ದೀನಳಾಗಿದಾಳೆ' ಎಂಬ ಮಾತನ್ನು ದೇಶೀತೋಡಿಯಲ್ಲಿ ನುಡಿಸುತ್ತಿರ ಬೇಕಾದರೆ ಅವರ ಮುಖದಲ್ಲಿ ಒಂದು ಅತಿಶಯವಾದ ದೈನ್ಯವು ತೋರು ವುದು; ಆ ಸ್ವರವು ಅಯ್ಯೋ ಎಂದು ಕನಿಕರವನ್ನುಂಟುಮಾಡುವಂತೆ ನುಡಿ ಯುವುದು. ಮುಖ್ಯ ಅವರು ಪಿಟೀಲು ನುಡಿಸುತ್ತಿದ್ದ ಹಾಗೆ ನಾನು ಈಚೆಗೆ ಯಾರಿಂದಲೂ ಕೇಳಿಲ್ಲ. ಯಾವ ಸಂಗೀತಗಾರನು ಗಾನವನ್ನು ಅಂತರ್ಯದಲ್ಲಿ ದೇವರ ಪೂಜೆಗೆಂದು ಉಪಯೋಗಿಸುವನೋ, ತನ್ನ ಬುದ್ಧಿ ಶಕ್ತಿಯ ಪ್ರದರ್ಶನಕ್ಕೆ ಅವಕಾಶವೆಂದು ಉಪಯೋಗಿಸುವುದಿಲ್ಲವೋ, ಅವನಿಗೆ ಮಾತ್ರ ಈ ರೀತಿಯ ಸೊಗಸು ಲಭ್ಯ. ಯಾವನು ಗಾನ ದೊಡ್ಡದು ತಾನು ಅಲ್ಪನೆಂದು ತಿಳಿದಿರುವನೋ, ತಾನು ದೊಡ್ಡ ವಿದ್ವಾಂಸ ತನ್ನ ವಿದ್ಯೆಯನ್ನು ತೋರಿಸುವುದಕ್ಕೆ ಗಾನವು ಸಾಧನ ಎಂದು ಇರುವುದಿಲ್ಲವೋ, ಅವನಿಗೆ ಮಾತ್ರ ಈ ರಸವು ಸಾಧ್ಯ. ಸಂಗೀತಗಾರರಿಗೆ ಸಂಗೀತದ ಮಾತನ್ನು ಹೇಳುವುದಕ್ಕೆ ನಾನು ಯಾವೂರ ದಾಸಯ್ಯ? ಆದರೆ ಸುಬ್ಬಣ್ಣ ನವರು ಬಾರಿಸಿದ್ದನ್ನು ಕೇಳಿದಾಗ ಸಭೆಯ ಪಂಡಿತರೂ ಪಾಮರರೂ ಮೈಮರೆಯುತ್ತಿದ್ದಹಾಗೆ ಈಚೆಗೆ ಇತರರು ಬಾರಿಸಿದಾಗ ಮೈಮರೆತದ್ದನ್ನು ನಾನು ನೋಡಿಲ್ಲ. ಆ ದಿನ ಸಾಹುಕಾರನ ಮನೆಯಲ್ಲಿ ಸುಬ್ಬಣ್ಣನವರು 'ಸಾ ವಿರಹೇ ತವ ದೀನಾ' ಎಂದು ಪಿಟೀಲಿನಲ್ಲಿ ರಾಧೆಯ ದೈನ್ಯವನ್ನು ವರ್ಣಿಸಿದಾಗ ಪ್ರಕೃತಿಯು ಪರಮಾತ್ಮನ ಚಿರವಿರಹದಿಂದ ಅನುಭವಿಸು ತ್ತಿರುವ ದುಸ್ಸಹವಾದ ದುಃಖವು ಅಲ್ಲಿ ಹೊಳೆಯಾಗಿ ಹರಿದಂತೆ ತೋರಿತು. ಸಾಹುಕಾರನು ಕಣ್ಣಲ್ಲಿ ನೀರು ಸುರಿಸಿದನು. ಅವನ ಹೆಂಡತಿಯೂ ಬಂದು

ಅಲ್ಲೇ ಕುಳಿತು, ನಮ್ಮಪ್ಪ ಭೇಷ್ ಬಾರಿಸಿದಿರಿ ಎಂದಳು. ಅವರ ಮಗಳು ಬಂದು ಸುಬ್ಬಣ್ಣನವರ ಹತ್ತಿರ ಕುಳಿತು ಇದೇನು ವಿಚಿತ್ರ ಎಂದು ನೋಡುವ ಳಂಬಂತೆ ಒಂದು ನಿಮಿಷ ಸುಬ್ಬಣ್ಣನ ಮುಖವನ್ನೇ ನೋಡುತ್ತಾ ಒಂದು ನಿಮಿಷ ಪಿಟೀಲಿನ ಮೇಲೆ ಅವರ ಕೈ ಆಡುವುದನ್ನೇ ನೋಡುತ್ತಾ ಇದ್ದಳು. ಸುಬ್ಬಣ್ಣನವರಿಗೂ ಆ ದಿನ ಅದುವರೆಗೆ ಬಹಳ ದಿನ ಬಾರದೇ ಇದ್ದ ಗಾನ ಶಕ್ತಿಯು ಬಂದಿತ್ತು. ವಿರಹದಿಂದ ವ್ಯಥೆಪಡುತ್ತಿದ್ದವಳು ರಾಧೆಯಲ್ಲ; ತಾವು. ಮಾನವರೆಲ್ಲ ಈ ವಿರಹದಲ್ಲಿದಾರೆ. ಆದರೆ ಅವರಿಗೆ ಅದರ ಜ್ಞಾನ ಬಂದಿಲ್ಲ. ಸಂಸಾರವೇ ಈ ವಿರಹ. ತಾವು ತಮ್ಮ ದೇವರನ್ನು ಹುಡುಕುತ್ತ ಅವನನ್ನು ಕಾಣದೆ ಪಡುತ್ತಿದ್ದ ಕ್ಷೋಭೆಯೇ ಈ ಸಂಸಾರ ದುಃಖ. ಅವನನ್ನು ಕಂಡ ಒಂದೆರಡು ಗಳಿಗೆಗಳಲ್ಲಿ ತಾವು ಸುಖವಾಗಿಯೇ ಇದ್ದರು. ಅರುವತ್ತು ವರುಷದಲ್ಲಿ ಪರಮಾತ್ಮನನ್ನು ಕಂಡಂತಾದದ್ದು ಆ ಎರಡು ಮೂರು ಕ್ಷಣ ಮಾತ್ರ. ಅದೂ ಕನಸಿನಲ್ಲಿ ಕಂಡ ಹಾಗೆ. ಸುಬ್ಬಣ್ಣ ನವರಿಗೆ ಈ ಜೀವನವು ಬಹು ಬೇಸರವಾಗಿ ಕಂಡಿತು. ದೇವರು ತಮ್ಮನ್ನು ಇಲ್ಲಿ ಇರು ಎಂದು ಹೇಳಿ ತಾನು ಮಾತ್ರ ಇಲ್ಲಿಲ್ಲದೆ ಮರೆಯಾಗಿರುವನು. ಈ ಬಾಳು ಮುಗಿದ ಮೇಲೆ ಅಲ್ಲವೆ ಅವನನ್ನು ಸೇರುವುದು? ದೇವರೇ ಎಂದಿಗೆ ನನ್ನನ್ನು ಕರೆದುಕೊಳ್ಳುವೆ ಎಂದುಕೊಂಡರು. ನಿನ್ನ ವಿರಹದಿಂದ ನಾನು ದೀನನಾಗಿದೇನೆ ಎಂದು ಮತ್ತೆ ಮತ್ತೆ ನುಡಿಸಿದರು. ಸಾಹು ಕಾರನು ಸುಖದಲ್ಲಿದ್ದನು. ಅವನಿಗೆ ಹೆಂಡತಿ ಹತ್ತಿರ ಇದ್ದಳು. ಮಗಳೂ ಹತ್ತಿರ ಇದ್ದಳು. ಇಂಥ ಸಂತೋಷದ ಮಧ್ಯದಲ್ಲಿ ಅಂಥ ಸಂತೋಷ ವಿಲ್ಲದ ಮನುಷ್ಯನಿಗೆ ತನ್ನನ್ನೇ ಅರಿಯದ ಒಂದು ಉತ್ಕಾನತೆ ಬರುತ್ತದೆ. ಈ ಉತ್ಕಾನತೆಯು ಸುಬ್ಬಣ್ಣನವರ ಆ ಗಾನದಲ್ಲಿ ಮಿಂಚಿನ ಬಳ್ಳಿಯಂತೆ ರೂಪನ್ನು ತಳೆಯಿತು. ಅವರ ಹೃದಯದ ದೈನ್ಯವು ಆ ಇತರ ಹೃದಯ ಗಳನ್ನು ಆವರಿಸಿ ಲೋಕವೆಲ್ಲ ಈ ವಿರಹದ ದೈನ್ಯದಲ್ಲಿ ಮರುಗುತ್ತಿದೆಯೋ ಎಂಬಂತೆ ತೋರಿಸಿತು.

ಹಾಡು ಮುಗಿದ ಮೇಲೆ ಸುಬ್ಬಣ್ಣನವರು ಮತ್ತೆ ಬರುತ್ತೇನೆಂದು ಹೊರಟುಹೋದರು. ಆ ದಿನ ಅವರಿಗೆ ಏನೂ ಬೇಕು ಎನ್ನುವಂತೆ ಇರಲಿಲ್ಲ. ಅವರು ಸಮೀಪದ ಒಂದು ದೇವಾಲಯದ ಬಳಿ ಕುಳಿತು ತನ್ನ ಸ್ಥಿತಿ

ಯನ್ನೆಲ್ಲ ಕುರಿತು ಯೋಚಿಸುತ್ತಾ ದೇವರೇ ಕೃಪೆ ಮಾಡು, ದೇವರೇ ಕೃಪೆ ಮಾಡು, ಏನು ಮಾಡುವುದೆಂದು ತೋರಿಸು, ಈ ಅತಿಘೋರವಾದ ಬೇಸರವನ್ನು ಹೋಗುವಂತೆ ಮಾಡು, ಎಂದು ಪ್ರಾರ್ಥಿಸುತ್ತಿದ್ದರು. ಅವರು ಅಂದು ಬ್ರಹ್ಮಾಂಡದ ದೈನ್ಯರಸಕಟಾಹದ ಪಕ್ಕದಲ್ಲಿ ನಿಂತು ಸಣ್ಣ ಒಂದು ರಂಧ್ರವನ್ನು ಕೊರೆದ ಹುಡುಗನಂತೆ ಆದರು. ಇಷ್ಟು ಯೋಚನೆಗೆ ಕಾರಣವಿಲ್ಲವೆಂದು ತನಗೆ ತಾನೇ ಎಷ್ಟು ಹೇಳಿಕೊಂಡರೂ ದೈನ್ಯವು ಮತ್ತೆ ಮತ್ತೆ ಅವರನ್ನು ಆವರಿಸಿತು. ಭಗವಂತನು ಮಾನವನ ಆತ್ಮವನ್ನು ತನ್ನ ಬಳಿಗೆ ಕರೆದುಕೊಳ್ಳುವುದು ಹೀಗೆಯೇ ಎಂದು ತೋರುತ್ತದೆ. ಸರಿಯಾದ ಸಮಯವನ್ನು ನೋಡಿ ಕಷ್ಟವನ್ನೋ ಸುಖವನ್ನೋ ಕೊಟ್ಟು ಮನುಷ್ಯನು ತನ್ನನ್ನು ಅಪೇಕ್ಷಿಸುವಂತೆಯೂ ತನ್ನನ್ನು ನಂಬುವಂತೆಯೂ ಮಾಡಿ ಮತ್ತೆ ಮತ್ತೆ ಈ ಅಪೇಕ್ಷೆಯೂ ಈ ನಂಬಿಕೆಯೂ ಹೃದಯದಲ್ಲಿ ಆವಿರ್ಭವಿಸುವಂತೆ ಮಾಡುವನು. ಆ ದಿನವು ಸುಬ್ಬಣ್ಣನವರಿಗೆ ಈ ದೈನ್ಯದ ತಪಸ್ಸಿನಿಂದ ತುಂಬಿಹೋಯಿತು.

ಆ ದಿನ ರಾತ್ರಿ ಸುಬ್ಬಣ್ಣನವರಿಗೆ ಒಂದು ಕನಸಾಯಿತು. ಅದರಲ್ಲಿ ತಾವು ಮೈಸೂರಿನಲ್ಲಿ ಇದ್ದಂತೆಯೂ ತಮ್ಮ ತಾಯಿತಂದೆಗಳ ಸೇವೆಯನ್ನು ಮಾಡುತ್ತಿದ್ದಂತೆಯೂ ತೋರಿ ಅವರು ಅರ್ಧ ರಾತ್ರಿಯಲ್ಲಿ ಎಚ್ಚತ್ತು, ಇದೇನು ಸ್ವಪ್ನ, ಅರುವತ್ತು ವರುಷದ ಮುದುಕನಾದೆ, ನಾಟಕ ಮುಗಿಯುತ್ತಾ ಬಂತು, ಈಗ ತಂದೆತಾಯಿಗಳ ಭ್ರಾಂತಿ ಏನು ಬಂತು, ಎಂದು ಆ ಯೋಚನೆಯನ್ನು ನಿವಾರಿಸಿಕೊಂಡರು. ಆದರೆ ಆ ಯೋಚನೆಯನ್ನು ಬಿಟ್ಟು ಇನ್ನು ಯಾವ ಯೋಚನೆಯನ್ನು ಮಾಡುವುದು? ಹಾಗೆಯೇ ಆ ಯೋಚನೆಯನ್ನೇ ಮಾಡುತ್ತ ಮಲಗಿದ್ದರು. ಆಗ ಅವರಿಗೆ ಆ ಮುದುಕಿ ಹೇಳಿದ ಮಾತು ಜ್ಞಾಪಕ ಬಂದಿತು. "ಪರದೇಶದಲ್ಲಿದೀಯೆ. ಕಾಯಿಲೆ ಬಿದ್ದರೆ ಕೇಳುವವರು ಯಾರು? ಸತ್ತರೆ ಸುಡುವರಿಲ್ಲ. ಹೆಣ ನಾಯಿ ಪಾಲಾಗುತ್ತದೆ." ಅದರೊಂದಿಗೆ ಸುಬ್ಬಣ್ಣನವರಿಗೆ, ಏನಾದರೂ ಸರಿ, ಒಡನೆಯೇ ಊರಿಗೆ ಹೋಗಿ ಸೇರಬೇಕು, ಎಂದು ತೋರಿತು, ಹೋಗಬೇಕೆಂಬ ಆಸೆಯು ಬಹುವಾಗಿ ಬೆಳೆಯಿತು. ಮಾರನೆಯ ದಿನ ಅವರು ಸಾಹುಕಾರನ ಮನೆಗೆ ಹೋದಾಗ ಸಾಹುಕಾರನು ಇನ್ನೂ ಮನೆಗೆ

ಬಂದಿರಲಿಲ್ಲ. ಮನೆಯ ಯಜಮಾನಿಯು ಇವರನ್ನು ಕುಳ್ಳಿರಹೇಳಿ ಸ್ವಲ್ಪ ಹಣ್ಣು ಹಂಪಲನ್ನು ತಂದಿಟ್ಟು, ಒಂದು ಬಟ್ಟಲು ಹಾಲನ್ನು ತಂದು ಕೊಟ್ಟು, ತೆಗೆದುಕೊಳ್ಳಿ, ಸಾಹುಕಾರರು ಬರುತ್ತಾರೆ ಎಂದಳು. ಅವರ ಮಗಳು ಒಂದು ಹತ್ತಿರ ಕುಳಿತು ಹಣ್ಣು ತಕ್ಕೊಳ್ಳಿ ಎಂದು ಒಂದು ಹಣ್ಣನ್ನು ಎತ್ತಿಕೊಟ್ಟಳು. ಸುಬ್ಬಣ್ಣನವರಿಗೆ ಕ್ಷಣಮಾತ್ರ ಬಹಳ ಸಂತೋಷವಾಯಿತು. ತನ್ನ ಮಗು ಹಾಗೆ ಎತ್ತಿಕೊಡುತ್ತಿದ್ದದ್ದು ಜ್ಞಾಪಕ ಒಂದು ಒಡನೆ ಬಹಳ ಖೇದವುಂಟಾಯಿತು. ಇದು ಏಕೋ, ಮರೆಯೋಣವೆಂದರೆ ಜಡದೆ ಜ್ಞಾಪಕ ಮಾಡುವ ಸಂದರ್ಭಗಳೇ ಒರುತ್ತಿವೆಯಲ್ಲಾ ಎಂದು ಅವರು ಇಲ್ಲಿಂದ ಎಷ್ಟು ಬೇಗನೆ ಆದರೆ ಅಷ್ಟು ಬೇಗನೆ ಹೊರಡಬೇಕು ಎಂದುಕೊಂಡರು. ಸಾಹುಕಾರನು ಬಂದಮೇಲೆ ಇವರು ಗೀತಗೋವಿಂದದ ಗೀತವೊಂದನ್ನು ನುಡಿಸಿದರು. ಸಾಹುಕಾರನಿಗೆ ಪರಮಾನಂದವಾಯಿತು. ಅವನು ಅಯ್ಯಾ ನೀವು ಇಲ್ಲೇ ನನ್ನ ಹತ್ತಿರ ಸಂಬಳಕ್ಕೆ ಇದ್ದುಬಿಡಿ ಎಂದು ಕೇಳಿದನು. ಅದಕ್ಕೆ ಸುಬ್ಬಣ್ಣನವರು ಅದಕ್ಕೇನೂ ಅಡ್ಡಿಯಿಲ್ಲ, ಆದರೆ ನಾನು ಪರ ದೇಶಕ್ಕೆ ಬಂದು ಬಹಳ ವರುಷವಾಯಿತು, ಊರಿಗೆ ಹೋಗಬೇಕು ಎಂದರು. ಅನಂತರ ಸಾಹುಕಾರನು ಸಮಾಚಾರವನ್ನೆಲ್ಲಾ ಕೇಳಿದನು. ಎಲ್ಲವನ್ನೂ ಸಂಕ್ಷೇಪವಾಗಿ ಕೇಳಿ ತಿಳಿದ ಮೇಲೆ "ಹಾಗಾದರೆ ನೀವು ಊರಿಗೆ ಹೋಗುವುದೇ ಸರಿ. ನಿಮಗಾದಷ್ಟು ದಿನ ಇಲ್ಲಿದ್ದು ಆಮೇಲೆ ಹೋಗಿ" ಎಂದನು. ಸುಬ್ಬಣ್ಣನವರು "ಅಪ್ಪಣೆಯಾದರೆ ನನ್ನ ರೈಲ್ ಛಾರ್ಜಿಗೆ ಹಣ ಸಂಪಾದಿಸುವವರೆಗೆ ಇಲ್ಲಿದ್ದು ಆಮೇಲೆ ಹೊರಡುತ್ತೇನೆ" ಎಂದು ಹೇಳಿದರು. ಸಾಹುಕಾರನು ಆಗಬಹುದು ಎಂದು ಹೇಳಿದನು. ಮಾರನೆಯ ದಿನ ಇವರು ಪಿಟೀಲನ್ನು ತೆಗೆದುಕೊಂಡು ಹೋಗುವ ವೇಳೆಗೆ ಒಂದು ತಟ್ಟೆಯಲ್ಲಿ ಎಲೆ ಅಡಿಕೆ, ಒಂದು ಜೊತೆ ಪಂಚೆ, ಮೈಸೂರಿಗೆ ಒಂದು ಟಿಕೀಟು, ಒಂದು ನೂರು ರೂಪಾಯಿ ನೋಟು ಇಷ್ಟನ್ನು ಇಟ್ಟು ಕೊಂಡಿದ್ದು, ನಿಮಗೆ ಈ ದಿನ ಬಾರಿಸುವುದಕ್ಕೆ ಆದರೆ ಬಾರಿಸಿ ಇಲ್ಲದಿದ್ದರೆ ಈಗಲೇ ಊರಿಗೆ ಹೊರಡಿ, ನನ್ನ ಅಡ್ಡಿ ಇಲ್ಲ, ಎಂದನು. ಸುಬ್ಬಣ್ಣನವರು ಇದಕ್ಕೆ ನಾನು ಇನ್ನೂ ಚಾಕರಿ ಮಾಡಿ ಇಲ್ಲ ಎಂದರು. ಸಾಹುಕಾರನು ಅವರಿಗೆ ಬಹಳ ಉಪಚಾರದ ಮಾತನ್ನು ಹೇಳಿ ನೀವು ಗೀತಗೋವಿಂದದ

ಒಂದು ಚರಣವನ್ನು ನುಡಿಸಿದರೆ ನಿಮಗೆ ಒಂದು ಸಾವಿರ ರೂಪಾಯಿನ್ನು ಕೊಟ್ಟರೂ ಕಡಿಮೆ ಎಂದು ನುಡಿದು ಅವರನ್ನು ಅಂದೇ ಕೊಟ್ಟು ಕಳುಹಿಸಿದನು. ಸುಬ್ಬಣ್ಣನವರು ಆ ನೂರು ರೂಪಾಯಿಗಳನ್ನು ತೆಗೆದುಕೊಂಡರು. ಏಕೆಂದರೆ, ಅವರಿಗೆ ಮುದುಕಿಯ ಮಾತು ಜ್ಞಾಪಕದಲ್ಲಿತ್ತು. ಸಾಯುವ ದಿನಕ್ಕೆ ಖರ್ಚು ಹಣವನ್ನು ಸಿದ್ಧಮಾಡಿಕೊಳ್ಳಬೇಕೆಂದು ಅವರು ಖಂಡಿತಮಾಡಿಕೊಂಡಿದ್ದರು. ಆದರೂ ಅವಳು ಕೊಡುತ್ತೇನೆಂದ ಐದು ರೂಪಾಯಿಗಳನ್ನು ತೆಗೆದುಕೊಳ್ಳುವುದಕ್ಕೆ ಹೋಗಲಿಲ್ಲ. ಆ ದಿನ ರಾತ್ರಿ ಮೈಸೂರಿನ ಕಡೆಗೆ ಹೊರಟರು.

೮

ಈ ವರ್ಣನೆಯಲ್ಲೆಲ್ಲ ಒಣ್ಣ ಸಾಲದೆಂದು ನಾನು ಬಲ್ಲೆ. ಸುಬ್ಬಣ್ಣನವರ ಜೀವನವು ವಿಚಿತ್ರವಾದದ್ದು. ಅದರ ಭಾವನೆಗಳನ್ನೆಲ್ಲಾ ನಾನು ಎಷ್ಟು ಪ್ರಯತ್ನಪಟ್ಟರೆತಾನೆ ಊಹಿಸಲಾಗುತ್ತದೆ. ಮೂರು ದಿವಸದ ರೈಲು ಪ್ರಯಾಣ ಮುಗಿದು ಸುಬ್ಬಣ್ಣನವರು ಮೈಸೂರ ಹತ್ತಿರ ಹತ್ತಿರ ಬಂದರು. ಮದ್ದೂರು, ಮಂಡ್ಯ, ಶ್ರೀರಂಗಪಟ್ಟಣ, ಪಶ್ಚಿಮವಾಹಿನಿ; ಎಷ್ಟು ಸುಖವಾದ ಹೆಸರುಗಳು. ಆದರೆ ಪಿಟೀಲಿನ ದೀನಸ್ವರದಂತೆ ಅವು ಇವರ ಮನಸ್ಸಿಗೆ ದುಃಖ ಮಿಳಿತವಾದ ಸುಖವನ್ನು ಮಾತ್ರ ತಂದುವು. ಅಂದು ಈ ಊರುಗಳನ್ನು ಬಿಟ್ಟುಹೋದ ಅವಸ್ಥೆ ಏನು? ಇಂದು ಮತ್ತೆ ಬರುತ್ತಿರುವ ರೀತಿ ಏನು? ಆಗ್ಗೆ ಈಗ್ಗೆ, ಅದೂ ಇದೂ ಒಂದೇ ಜೀವನವೇ ಎರಡು ಬೇರೆಯವೇ, ಎನ್ನುವಷ್ಟು ಅಂತರ ಕಳೆದುಹೋಗಿತ್ತು. ಕನಸಿನಲ್ಲಿ ನಡೆಯುವವನಂತೆ ಅವರು ಮೈಸೂರಿನ ಹತ್ತಿರ ಹತ್ತಿರ ಸೇರಿದರು. ಸೀಮೆಯ ಕಥೆಯೇ ಬದಲಾಯಿಸಿದಂತೆ ರೈಲಿನ ಮಾತುಗಳಿಂದ ತಿಳಿದರು. ಮೊದಲೆತ್ತಿಕೊಳ್ಳುತ ಆಗ ಮೈಸೂರಿಗೆ ರೈಲು ಇರಲಿಲ್ಲ. ಈಗ ರೈಲು ಮೈಸೂರಿಂದ ಮುಂದಕ್ಕೆ ಹೊರಟುಹೋಗಿತ್ತು. ಆಗ ಯುವರಾಜರಾಗಿದ್ದ ಶ್ರೀ ಚಾಮರಾಜ ಒಡೆಯರವರು ಈಚೆಗೆ ರಾಜ್ಯವನ್ನಾಳಿ ಪ್ರಜೆಗಳನ್ನು ಮಕ್ಕಳಂತೆ ರಕ್ಷಿಸಿ ಕೆಲವು ವರ್ಷದ ಹಿಂದೆ ದೈವಾಧೀನರಾಗಿದ್ದರೆಂದು ಅವರು ಕಲಿಕತ್ತೆಯಲ್ಲಿಯೇ ಕೇಳಿದ್ದರು. ಇಲ್ಲಿ ಈಗ ಅವರ ಹಿರಿಯ

ಮಕ್ಕಳು ರಾಜ್ಯವಾಳುವುದನ್ನು ಬಲ್ಲರು. ಆದರೆ ಅವರ ಮನಸ್ಸಿಗೆ ಈ ಯುಗವೇ ಬೇರೆ ಎಂಬಂತೆ ತೋರಿತು. ಹೋಯಿತೆಂದು ತೋರಿದ ಯಾವುದೋ ಒಂದು ಒಳ್ಳೆಯುದನ್ನು ನೆನೆನೆನೆದು ಅವರು ಮರುಗಿದರು. ಆಮೇಲೆ, ನಾನು ಈ ರೀತಿ ಯೋಚನೆ ಮಾಡುವುದು ಸರಿಯಲ್ಲ, ಸಂನ್ಯಾಸಿ ಯಂತೆ ಇದ್ದುಬಿಡಬೇಕು ಎಂದು ಆ ಯೋಚನೆಯನ್ನು ಬಿಟ್ಟರು. ಮೈಸೂರಿನ ಹತ್ತಿರ ಹತ್ತಿರ ಬಂದಹಾಗೆ ತಂದೆತಾಯಿಗಳು ಜೀವಂತರಾಗಿರ ಬಹುದೇ? ಇದ್ದರೆ ಹೋಗಿ ನನ್ನ ತಪ್ಪನ್ನೆಲ್ಲಾ ಒಪ್ಪಿಕೊಳ್ಳುವುದು, ಮಗುವಿನಂತೆ ಅವರ ಸೇವೆಗೆ ನಿಲ್ಲುವುದು ಎಂದುಕೊಂಡರು. ಕಣ್ಣಿನಲ್ಲಿ ತಡೆಯಲಾರದೆ ಎರಡು ತೊಟ್ಟು ನೀರನ್ನು ಹಾಕಿದರು. ಈ ಯೋಚನೆ ಯನ್ನೆಲ್ಲಾ ಮಾಡುತ್ತಿರುವಾಗ ಮೈಸೂರಿನಲ್ಲಿ ರೈಲು ನಿಂತಿತು. ಸುಬ್ಬಣ್ಣ ನವರು ರೈಲಿನಿಂದ ಇಳಿದು ಪಿಟೀಲನ್ನೂ ಪಂಚೆಗಳನ್ನೂ ಕೊಂಕುಳಲ್ಲಿಟ್ಟು ಕೊಂಡು ಊರೊಳಕ್ಕೆ ಹೊರಟರು.

ಸುಬ್ಬಣ್ಣನವರು ಮೈಸೂರಿಗೆ ಹಿಂದಕ್ಕೆ ಬಂದಾಗ ವೈಶಾಖಮಾಸ. ಐದಾರು ದಿನಗಳಿಂದ ಸಂಜೆಯಲ್ಲಿ ಮಳೆ ಬಂದು ಆ ಉದಯದ ಆಕಾಶವು ಶುಭ್ರವಾಗಿತ್ತು. ಬೀದಿಗಳಲ್ಲೆಲ್ಲಾ ನೀರು ಹಾಕಿ ದೇವರ ಉತ್ಸವಕ್ಕೆ ಸರಿಮಾಡಿದಂತಿತ್ತು. ಗಾಳಿ ತಣ್ಣಗೆ ದಕ್ಷಿಣದಿಂದ ಹರಿದುಬರುತ್ತಿತ್ತು. ಎಲೆ ತುಂಬಿದ್ದ ಮರಗಳ ಮೇಲೆಲ್ಲಾ ನೂರಾರು ಹಕ್ಕಿಗಳು ಕುಳಿತು ಬಹು ಸಂಭ್ರಮದಿಂದ ಕಲಕಲ ಧ್ವನಿಯನ್ನು ಮಾಡುತ್ತಿದ್ದುವು. ಅಂದವಾದ ಉದಯ. ಆನಂದವನ್ನು ಕೋ ಎಂದು ಸಾವಿರ ಕೈಗಳಿಂದಲೂ ನೀಡಿ ಕೊಡುತ್ತಿರುವ ಬಾಲಸೂರ್ಯನು. ಇವರ ಹೃದಯದಲ್ಲಿ ಆನಂದವು ಉಕ್ಕಿ ಬರುವಂತೆ ಎದ್ದು ಪುನಃ ಕುಗ್ಗಿತು. ಹಿಂದೆ ಇಂಥ ಎಷ್ಟು ಉದಯಗಳಲ್ಲಿ ತಾವು ಎದ್ದು ದೊಡ್ಡ ಕೆರೆಗೆ ಹೋಗಿ ಪ್ರಾತಃಕರ್ಮಗಳನ್ನು ಮುಗಿಸಿ ಕೊಂಡು ಹೀಗೆ ಬೀಸುವ ತೆಂಗಾಳಿಗೆ ಮೈಯೊಡ್ಡಿ ಆನಂದದಿಂದ ಮನೆಗೆ ಬರುತ್ತಿದ್ದರು! ಆಗ ಈ ರಾಗದಲ್ಲಿ ಹೀಗೆ ಸಂಗತಿ ಹೀಗೆ ವರೇಕು, ಆ ರಾಗ ದಲ್ಲಿ ಹಾಗೆ ಸಂಗತಿ ಹಾಗೆ ವರೇಕು ಎಂದು ಎಷ್ಟು ಯೋಚನೆ! ಜೀವನ ದಲ್ಲಿ ಯಾವುದೋ ಕೋಟೆಗಳನ್ನು ಗೆಲ್ಲುವುದಕ್ಕಾಗಿ ಹೊರಟಿದ್ದಂತೆ ಸಂಭ್ರಮ. ಆ ಹುಮ್ಮಸು ಇನ್ನೆಲ್ಲಿ? ಜೀವನವು ಆಗ್ಗೆ ಇವರನ್ನು ಆಗ

ತಾನೆ ಆಟಕ್ಕೆಂದು ಕರೆಯುತ್ತಿತ್ತು. ಈಗ ಆಟ ಮುಗಿದಿತ್ತು. ಆ ಆಟವು ಇಂಥ ಬೇಸರದ ಆಟವೆಂದು ಆಗ ಯಾರಾದರೂ ಹೇಳಿದ್ದರೆ ತಾವು ನಂಬು ತ್ತಿರಲಿಲ್ಲ. ಏನೋ ಇನ್ನು ಆ ಯೋಚನೆಗಳೇಕೆ? ಇನ್ನು ತಮ್ಮ ಮಾತೇನು? ತಾವು ಸುಖಪಟ್ಟರೆಷ್ಟು? ಇಲ್ಲದಿದ್ದರೆಷ್ಟು? ಇಗೋ ಆಗ ಇದ್ದ ನೂರು ಜನಕ್ಕೆ ಬದಲಾಗಿ ಈಗ ಇನ್ನೂ ನೂರು ಜನ ಇದಾರೆ. ತನಗೆ ಬದಲಾಗಿ ಬೇರೆ ಹತ್ತು ಜನ ಇದಾರೆ. ಈ ಬಾಲಸೂರ್ಯನು ನೀಡುವ ಆನಂದವೂ ಈ ಬಾಲಸೂರ್ಯ ಸದೃಶನಾದ ರಾಜನು ಕೊಡುವ ಆಶ್ರಯವೂ ಈ ಊರಿನ ಬಹುವಿಧವಾದ ಜೀವನವೂ ಈಗ ಬೇರೆಯ ಜನಕ್ಕೆ. ಒಳ್ಳೆಯದು. ತನಗೆ ಇಲ್ಲದೇ ಹೋದ ಸುಖವು ಇವರಿಗೆ ಉಂಟಾಗಲಿ. ಹೀಗೆಂದುಕೊಂಡು ಸುಬ್ಬಣ್ಣನವರು ತಮ್ಮ ತಂದೆಯ ಮನೆ ಯಿದ್ದ ಅಗ್ರಹಾರದ ಒಳಗೆ ಬಂದು ಸೇರಿದರು. ಮನೆಯ ಹತ್ತಿರ ಬಂದಾಗ ಸುಬ್ಬಣ್ಣನವರ ಮನಸ್ಸಿನಲ್ಲಿ ಸಾವಿರಾರು ಯೋಚನೆ ಬಂದು ಪರದಾಡು ತ್ತಿತ್ತು. ಎಲ್ಲಿಯೋ ಜ್ಞಾನವಾಗಿರುವಂತೆ ಅವರು ಬಂದು ಮನೆಯ ಬಾಗಿ ಲಲ್ಲಿ ಜಗಲಿಯ ಮೇಲೆ ಕುಳಿತರು. ಇನ್ನೂ ಮನೆಯ ಬಾಗಿಲು ತೆಗೆದು ಇರಲಿಲ್ಲ. ರೈಲು ಸ್ವಲ್ಪ ಜಾಗ್ರತೆಯಾಗಿಯೇ ಸೇರಿತ್ತೆಂದು ಹೇಳಬೇಕು. ಜನವೂ ಇನ್ನೂ ಅಷ್ಟಾಗಿ ಓಡಾಡುತ್ತಿರಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಯಾರೋ ಮನೆಯ ಬಾಗಿಲನ್ನು ತೆಗೆದರು. ಸುಬ್ಬಣ್ಣನವರು ಆ ಕಡೆ ತಲೆ ತಿರುಗಿಸಿ ನೋಡಿದರು. ಯಾವುದೋ ಹೊಸ ಮುಖ. ಯಾರೋ ಮುದುಕ ಪಿಟೀಲು ಒಟ್ಟೆಯನ್ನು ಹತ್ತಿರ ಇಟ್ಟುಕೊಂಡು ಕುಳಿತಿರು ವುದನ್ನು ನೋಡಿ ಮನೆಯ ಮನುಷ್ಯನು ಯಾರಪ್ಪಾ ಅದು ಎಂದನು. ಸುಬ್ಬಣ್ಣನವರು ಹಠಾತ್ತಾಗಿ ನಾವು ಪರಸ್ಥಳ ಎಂದರು. ಈ ಮಾತನ್ನು ನನಗೆ ಏಳೆಂಟು ವರುಷಗಳ ಮೇಲೆ ಹೇಳಬೇಕಾದರೆ ಸುಬ್ಬಣ್ಣನವರು ಹೇಳಿದರು. "ನೋಡಿ, ಅವರು ಕೇಳಿದ ಕ್ಷಣ ಹಾಗೆಂದುಬಿಟ್ಟೆ. ಅಲ್ಲಿ ಹುಟ್ಟಿದ್ದು ಅಲ್ಲಿ ಬೆಳೆದದ್ದು; ಇಪ್ಪತ್ತೈದು ವರುಷವಾದ ಮೇಲೆ ಮನೆ ಬಿಟ್ಟು ಹೋದದ್ದು. ಕೊಂಚ ವರುಷ ಬೇರೆ ಊರಿಗೆ ಹೋಗಿದ್ದ ಮಾತ್ರಕ್ಕೇ ಅಲ್ಲಿ ಹುಟ್ಟಿದ್ದೂ ಬೆಳೆದದ್ದೂ ಇಲ್ಲವಾಯಿತೆ? ಆದರೂ ಕೇಳಿದ ಒಡನೆ ಪರಸ್ಥಳ ಎಂದುಬಿಟ್ಟೆ. ಒಂದು ಕ್ಷಣದ ಮೇಲೆ, ಎಲಾ ಏನು

ಹೀಗೆ ಹೇಳಿದೆ, ಇದು ಪರಸ್ಥಳ ಎಂದರೆ ಏನು ಕಲಿಕತ್ತೆ ಸ್ಥಳವಾಯಿತೇ? ದೇವರನ್ನು ಬಿಟ್ಟು ಈ ಪ್ರಪಂಚಕ್ಕೆ ಬಂದಿರೋದಾಯಿತು; ತಿರುಗಿ ಪರಶಿವನ ಹತ್ತಿರಕ್ಕೆ ಹೋದಾಗ ದ್ವಾರಪಾಲಕರು ಯಾರಪ್ಪಾ ಅದು ಎಂದರೆ ನಾನು ಪರಸ್ಥಳ ಎಂದರೆ ಏನು ಗತಿ! ನಿನ್ನ ಸ್ಥಳಕ್ಕೆ ಹೋಗು ಎನ್ನ ಬಹುದಲ್ಲಾ ಅವರು, ಈ ಪ್ರಪಂಚವೇ ನಮ್ಮೂರು ಎಂತ ನಾನೇ ಹೇಳಿದ ಹಾಗಾಗುತ್ತೆ ಎಂದೆಂದುಕೊಂಡೆ. ಆಮೇಲೆ ತಿರುಗಿ ತೋರಿತು. ಮೈಸೂರು ಪರಸ್ಥಳ ಎಂದೆ; ಕಲಕತ್ತೆ ಸ್ಥಳ ಅನ್ನಲಿಲ್ಲವಲ್ಲ. ಮೈಸೂರೂ ಪರಸ್ಥಳವೇ ಕಲಿಕತ್ತೆಯೂ ಪರಸ್ಥಳವೇ. ಸ್ಥಳ ಯಾವುದು ಎಂದರೆ ಕೈಲಾಸ ಎನ್ನುವುದು ಎಂದುಕೊಂಡೆ.'' ಪ್ರಾಯಶಃ ಆ ದಿನದ ಅವರ ಸ್ಥಿತಿಯನ್ನು ಅನುಭವಿಸಿದವರಿಗೆ ಕಣ್ಣಿನಲ್ಲಿ ನೀರು ಬರಬೇಕು. ಮನೆಯಾತ ಮತ್ತೆ ಬಾಗಿಲನ್ನು ಹಾಕಿಕೊಂಡು ಒಳಕ್ಕೆ ಹೊರಟುಹೋದನು. ಸುಬ್ಬಣ್ಣ ನವರು ಈ ಮನೆಯಲ್ಲಿ ಯಾರೋ ಹೊಸಬರಿದಾರೆಂದು ತಿಳಿದುಕೊಂಡು ಹಾಗೆಯೇ ಹೊರಟು ಕರುಹಟ್ಟಿಯ ಬಳಿ ಬಾಗಿಲು ಬೀಗ ಹಾಕಿದ್ದ ಒಂದು ಮನೆಯ ಜಗಲಿಯ ಮೇಲೆ ಕುಳಿತುಕೊಂಡರು. ಸ್ವಲ್ಪ ಹೊತ್ತಿನ ಮೇಲೆ ಮತ್ತೆ ಮನೆಯ ಬಳಿಗೆ ಹೋಗಿ ಅಲ್ಲಿದ್ದ ಯಾರನ್ನೋ ಕುರಿತು, ಅಪ್ಪಾ ಇಲ್ಲಿ ಪುರಾಣದ ಶಾಸ್ತ್ರಿಗಳು ಎಂತ ಇದ್ದರು, ಅವರ ವಿಚಾರ ಏನು ಎಂದರು.

''ಶಾಸ್ತ್ರಿಗಳು ತೀರಿಹೋಗಿ ಬಹಳ ವರ್ಷವಾಯಿತು.''

''ಅವರ ಮನೆಯವರು ಎಲ್ಲಿದ್ದಾರೆ?''

''ಅವರ ಮನೆಯವರು ಯಾರೂ ಇಲ್ಲ.''

''ಅವರ ಹೆಂಡತಿ''—

''ಅವರೂ ತೀರಿಹೋದರು.''

''ಅವರ ಹೆಣ್ಣುಮಕ್ಕಳು ಇಲ್ಲಿ ಎಲ್ಲಿಯೋ ಇದ್ದರಂತಲ್ಲಾ?''

''ಒಬ್ಬಾಕೆ ತೀರಿಹೋದರು. ಇನ್ನೊಬ್ಬರು ಅವರ ಮಗನ ಹತ್ತಿರ —ಅದೆಲ್ಲೋ ಅವರಿಗೆ ಕೆಲಸವಿದೆಯಂತೆ—ಅಲ್ಲಿ ಇದಾರೆ. ನಾವು ಈ ಮನೆಯನ್ನು ಕೊಂಡುಕೊಂಡೆವು.''

ತಂದೆತಾಯಿಗಳು ತೀರಿಹೋಗಿರಬೇಕೆಂದೂ ಅಕ್ಕಂದಿರೂ ಏನೇನಾಗಿದಾರೋ ಎಂದೂ ಸುಬ್ಬಣ್ಣನವರು ಮೊದಲೇ ನಿರಾಶರಾಗಿದ್ದರೂ ಇಲ್ಲಿ ಕೇಳಿದ ಒಂದೊಂದು ಮಾತೂ ಅವರ ಮನಸ್ಸಿನಮೇಲೆ ಒಂದೊಂದು ವಜ್ರದ ಏಟಿನಂತೆ ಬಿತ್ತು. ಅಲ್ಲಿಂದ ಅವರು ಮಂಕನಂತೆ ಕೆರೆಯ ಕಡೆ ಹೊರಟರು. ಮೈಸೂರು ಪರಸ್ಥಳವಲ್ಲದೆ ಇನ್ನೇನು? ಬೆಳೆದಕಡೆ ನಾವೇನು ಬೇರುಬಿಟ್ಟಿರುತ್ತೇವೆಯೇ? ಜನರಲ್ಲಿ ಬಾಳಿ ಅವರ ಮನ್ನಣೆಯನ್ನು ಪಡೆದು ನಮ್ಮ ಜೀವನದ ಬೇರು ಬೇರೆ ಜೀವನಕ್ಕೆ ಸೇರುವಹಾಗೆ ಎಲ್ಲಿ ಮಾಡಿದರೆ ಅಲ್ಲಿ ಸ್ಥಳ. ತಿಳಿದ ಜನ ಇಲ್ಲದಮೇಲೆ ಹುಟ್ಟಿದ ಊರೂ ಪರಸ್ಥಳವೇ. ಸುಬ್ಬಣ್ಣನವರು ಕೆರೆಗೆ ಹೋಗಿ ತಲೆಗೆ ಸ್ನಾನಮಾಡಿ ತಂದೆಗೆ ತರ್ಪಣವನ್ನು ಬಿಟ್ಟು, ತಾಯಿಗೂ ಒಂದು ತರ್ಪಣವನ್ನು ಬಿಟ್ಟು, ಇದೇ ನಾನು ನಿಮ್ಮ ಮಗನಾದುದಕ್ಕೆ ನಿಮಗೆ ಮಾಡಿದ ಶುಶ್ರೂಷೆ, ಉತ್ತರಕ್ರಿಯೆ, ಎಂದುಕೊಂಡು ತೊರೆಯಪುರಕ್ಕೆ ಹೋಗುವುದೇ ನಂಜನಗೂಡಿಗೆ ಹೋಗುವುದೇ ಎಂದು ಯೋಚಿಸಿ ನಂಜನಗೂಡಿನಲ್ಲಿ ಜನಸಂದಣಿ, ತೊರೆಯಪುರದಲ್ಲಿ ಗಲಾಟೆಯಿಲ್ಲ, ನಾರಾಯಣ ಗೋವಿಂದ ಎಂದುಕೊಂಡು ನೆಮ್ಮದಿಯಾಗಿರಬಹುದು, ಇನ್ನು ನನಗೆ ಆಗಬೇಕಾದುದೇನು? ಎಂದುಕೊಂಡು ತೊರೆಯಪುರವನ್ನು ಕುರಿತು ಪ್ರಯಾಣಮಾಡಿದರು.

೯

ಸುಬ್ಬಣ್ಣನವರು ತೊರೆಯಪುರದಲ್ಲಿ ಹದಿಮೂರು ವರುಷ ಇದ್ದರು. ಕೊನೆಕೊನೆಗೆ ಅವರ ಮನಸ್ಸಿನಿಂದ ಈ ಅಶಾಂತಿಯೆಲ್ಲಾ ವಾಸಿಯಾಗಿ ಹೋಯಿತು. ಕೊನೆಗೆ ಅವರು ತತ್ತ್ವಜ್ಞಾನಿಗಳಾದರೆಂದೇ ನನ್ನ ಭಾವನೆ. ಯಾರಿಗೂ ಒಂದು ಕೆಟ್ಟ ಮಾತನ್ನು ಹೇಳದೆ ಯಾರಿಂದಲೂ ಒಂದಿಷ್ಟನ್ನು ಬೇಕೆಂದು ಕೇಳದೆ, ಜೀವನದಲ್ಲಿ ಇದು ಕುಂದು ಇದು ಕೊರತೆ ಎಂಬ ವ್ಯಥೆಯನ್ನು ಕಾಣದೆ ಸರ್ವದಾ ಶಾಂತಭಾವದಿಂದ ದೇವರ ಧ್ಯಾನದಲ್ಲಿದ್ದವರು ತತ್ತ್ವಜ್ಞಾನಿಗಳಲ್ಲದೆ ಏನು? ಆದರೆ ಅವರು ವೇಷದಲ್ಲಿ ಈ ತತ್ತ್ವಜ್ಞಾನಿಯಂತೆ ಇದ್ದರೆಂದು ಹೇಳಲಾರೆ. ಕೊನೆಗೂ ಪಿಟೀಲನ್ನು ಬಾರಿಸುತ್ತಾ ಇದ್ದರು. ಕೆಲವರಿಗೆ ಪಾಠ ಹೇಳುವರು. ಒಂದು ಮನೆಯೊಳಕ್ಕೆ ಹೋಗಿ ಮಲಗು

ತ್ತಿರಲಿಲ್ಲ. ಯಾವುದಾದರೂ ಒಂದು ಜಗಲಿ. ಇನ್ನು ಯಾವುದೂ ಇಲ್ಲದೆ ಇದ್ದರೆ ದೇವಸ್ಥಾನದ ಮುಂಭಾಗ. ಒಂದು ಜಗಲಿಯ ಮೇಲೆ ಇದ್ದಾಗ ಮಳೆ ಇರಿಚಲು ಬಡಿದರೆ ಅದರ ಮುಂದುಗಡೆಯ ಮನೇ ಜಗಲಿಗೆ ಹೋಗು ವರು. ಹೀಗೆ ಹದಿಮೂರು ವರುಷ ಇವರು ತೊರೆಯುಪುರದಲ್ಲಿ ಜೀವಿಸು ತ್ತಿದ್ದರು. ಕೊಂಚ ದಿನದಲ್ಲೇ ಸುಬ್ಬಣ್ಣನವರನ್ನು ಕಂಡರೆ ಊರಿನ ಜನ ಕ್ಕೆಲ್ಲಾ ಪ್ರೀತಿ, ಗೌರವ. ಎಲ್ಲರೂ ಅವರಿಗೆ ತಮ್ಮ ಕೈಯಲ್ಲಾದ ಸಹಾಯ ಮಾಡಬೇಕೆಂದು ನೋಡುವರು. ಆದರೆ ಅವರಿಗೆ ಬೇಕಾದದ್ದು ಏನಿತ್ತು? ನಮ್ಮ ಮನಸ್ಸಿನ ತೃಪ್ತಿಗಾಗಿ ನಾವು ಅವರಿಗೆ ಏನಾದರೂ ಕೊಡಬೇಕೇ ಹೊರತು ಅವರಿಗೆ ಏನೂ ಅಪೇಕ್ಷೆ ಇಲ್ಲ. ಹೀಗೆ ಸುಬ್ಬಣ್ಣನವರು ತೊರೆಯು ಪುರದಲ್ಲಿ ಒಬ್ಬ ಯೋಗಿಯಂತೆ ಕಾಲವನ್ನು ಕಳೆದು ಕೊನೆಗೆ ದೇವರ ಪಾದಾರವಿಂದವನ್ನು ಸೇರಿದರು. ಅಲ್ಲಿ ಅವರಿದ್ದ ರೀತಿಯನ್ನು ಸ್ವಲ್ಪ ಹೇಳಿದರೆ ಈ ಕಥೆ ಮುಗಿಯಿತು.

ಸುಬ್ಬಣ್ಣನವರು ತೊರೆಯುಪುರಕ್ಕೆ ಆ ದಿನ ಮಧ್ಯಾಹ್ನ ಬಂದು ಸೇರಿ ದರು. ತೊರೆಯುಪುರ ಒಂದು ತಾಲ್ಲೂಕು ಸ್ಥಳ; ನದೀತೀರ; ಒಳ್ಳೆಯ ಅಗ್ರಹಾರ, ಬ್ರಾಹ್ಮಣರ ಶ್ರೇಣಿ, ದೊಡ್ಡ ದೇವಾಲಯ. ತಪಸ್ಸಿಗೆ ಸ್ಥಳ ಬೇಕೆಂದವರಿಗೆ ಪ್ರಶಸ್ತವಾದ ಸ್ಥಳ. ಅಂದಿನ ರಾತ್ರಿ ಅವರು ದೇವಾಲಯದ ಮುಂದುಗಡೆ ಹಾಗೆಯೇ ಮಲಗಿಕೊಂಡರು. ರಾತ್ರಿಯಲ್ಲಿ ನಾಲ್ಕಾರು ಸಲ ನಾನು ಕೇವಲ ದಿಕ್ಕಿಲ್ಲದಾದೆ ಎಂದು ಕತ್ತಲಲ್ಲಿ ಮಗು ಭಯಪಡು ವಂತೆ ಭಯಪಟ್ಟು ನಿದ್ದೆಯಿಂದ ಎದ್ದರು. ನಾಲ್ಕು ಸಲವೂ ಮನಸ್ಸಿನಲ್ಲಿ "ಈ ಭಯವು ಸರಿಯಲ್ಲ. ದಿಕ್ಕಿಲ್ಲದವರಿಗೆ ದೊಡ್ಡ ದಿಕ್ಕು ದೇವರು. ನನಗೆ ಆಗಬೇಕಾದುದೇನು? ನನಗೆ ಭಯವೇನು? ನಾರಾಯಣಾ ಎನ್ನುತ್ತಾ ನಿಶ್ಚಿಂತನಾಗಿ ಕಾಲ ಕಳೆಯುವುದೊಂದೇ ಈಗ ಕೆಲಸ. ನಾನು ಇತರರಂತೆ ಇಲ್ಲವಲ್ಲಾ ಎಂದು ಬೇಕಾದರೆ ದುಃಖಪಡಬೇಕಲ್ಲದೆ ಇನ್ಯಾವ ಕಾರಣವೂ ಇಲ್ಲ ದುಃಖಕ್ಕೆ. ಇತರರಂತೆ ಇದ್ದದ್ದೂ ಆಯಿತು. ಹೆಂಡತಿ ಮಕ್ಕಳನ್ನು ನೋಡಿದ್ದಾಯಿತು. ಇತರರು ಇನ್ನೂ ಅದರಲ್ಲಿ ಇದಾರೆ. ನನಗೆ ಅದು ತಪ್ಪಿತು. ಅವರ ಬದುಕು ಹಾಗೆ, ನನ್ನ ಬದುಕು ಹೀಗೆ. ಇದು ದೇವರ ಇಚ್ಛೆ. ಇದಕ್ಕೆ ಯೋಚನೆಯೇಕೆ" ಎಂದುಕೊಂಡರು. ಮಾರನೆಯ ದಿನ

ಎದ್ದಾಗ ಹಿಂದಿನ ರಾತ್ರಿಯ ಯೋಚನೆಯಿಂದ ಉಂಟಾಗಿದ್ದ ವ್ಯಥೆಯಿಂದ ಕುಗ್ಗಿ ಹಾಗೆಯೇ ಸ್ವಲ್ಪ ಹೊತ್ತು ಕುಳಿತಿದ್ದರು. ಆಮೇಲೆ ನದಿಗೆ ಹೋಗಿ ಉದಯದ ಆಹ್ನಿಕಗಳನ್ನು ಮುಗಿಸಿಕೊಂಡು ಬಂದು ದೇವಸ್ಥಾನದ ಮುಂದುಗಡೆಯೇ ಸುಮ್ಮನೆ ಕುಳಿತರು.

ಊರಿನ ಜನ ನದಿಗೆ ಬಂದ ಕೆಲವರು ಹತ್ತಿರ ಪಿಟೀಲನ್ನೂ ಒಂದೆರಡು ಬಟ್ಟೆಯನ್ನೂ ಇರಿಸಿಕೊಂಡು ಕುಳಿತಿರುವ ಈ ನೋತ ಮುಖದ ಮುದುಕನನ್ನು ನೋಡಿ, ಇವನ್ಯಾರೋ, ಪಾಪ, ಎಂದುಕೊಂಡು ಹೋದರು. ಇದು ಯಾವುದನ್ನೂ ಸುಬ್ಬಣ್ಣನವರು ಗಮನಿಸಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಅಲ್ಲಿಗೆ ಒಬ್ಬ ಹುಡುಗ ಬಂದನು. ಅವನು ಆ ಊರ ವೇಶ್ಯೆಯೊಬ್ಬಳ ಮಗ. ಅವನಿಗೆ ಸಂಗೀತ ಸ್ವಲ್ಪ ಬರುತ್ತಿತ್ತು. ಅವನು ಪಿಟೀಲನ್ನೂ ಸ್ವಲ್ಪ ಬಾರಿಸಬಲ್ಲನು. ಅವನು ಸುಬ್ಬಣ್ಣನವರ ಪಕ್ಕದಲ್ಲಿದ್ದ ಪಿಟೀಲನ್ನು ನೋಡಿ ಹತ್ತಿರ ಬಂದು ಬಹಳ ಧಾರಾಳವಾಗಿ "ಯಾವ ಊರು ಸ್ವಾಮಿ ನಿಮ್ಮದು" ಎಂದನು. ಸುಬ್ಬಣ್ಣನವರು ಮಾತಾಡಲಿಲ್ಲ. ಅವರಿಗೆ ಬಂದು ಹೋಗುವವರ ಹತ್ತಿರ ಮಾತಾಡುವುದಕ್ಕೆ ಆಗ ಸಹನೆ ಇರಲಿಲ್ಲ. ಹುಡುಗ ಒಂದು ಕ್ಷಣ ಬಿಟ್ಟು, ಏನು ಸ್ವಾಮಿ, ನಿಮ್ಮದು ಯಾವ ಊರು ಎಂದನು. ಸುಬ್ಬಣ್ಣನವರು ಬೇಸರದಿಂದ, ಯಾವುದೋ ಊರು ಎಂದರು. ಹುಡುಗ ಈ ಉತ್ತರಕ್ಕೆ ಹೆದರಿ ಹೊರಟುಹೋಗಲಿಲ್ಲ. ಅಲ್ಲೇ ಕುಳಿತುಕೊಂಡು ಪಿಟೀಲನ್ನು ತೆಗೆದುಕೊಂಡು ನೋಡಿದನು. ಒಳ್ಳೆಯ ಪಿಟೀಲು. "ಏನು ಸ್ವಾಮಿ, ಒಳ್ಳೇ ಪಿಟೀಲು, ಸ್ವಲ್ಪ ಬಾರಿಸಿ, ನೋಡೋಣ" ಎಂದನು. ಸುಬ್ಬಣ್ಣನವರು ಮಾತನಾಡಲಿಲ್ಲ. ಒಂದು ಕ್ಷಣ ಬಿಟ್ಟುಕೊಂಡು ಹುಡುಗ "ಸ್ವಾಮಿ, ಈ ಪಿಟೀಲು ನನಗೆ ಮಾರಿಬಿಡಿ. ಹದಿನೈದು ರೂಪಾಯಿ ಕೊಡುತೇನೆ" ಎಂದನು. ಈ ಮಂಕು ಮುಖದ ಮನುಷ್ಯ ಪಿಟೀಲು ಏನು ಬಾರಿಸಿಯಾನು? ಎಲ್ಲೋ ಹೊಡೆದುಕೊಂಡು ಬಂದಿದಾನೆ. ಸುಲಭವಾಗಿ ಸಿಕ್ಕಬಹುದು—ಎಂದು ಅವನ ಯೋಚನೆ. ಸುಬ್ಬಣ್ಣನವರು ಮಾತನಾಡಲಿಲ್ಲ. ಹುಡುಗ ಮತ್ತೆ "ಏನು ಸ್ವಾಮಿ" ಎಂದನು. ಸುಬ್ಬಣ್ಣನವರು "ಅಪ್ಪಾ, ನಾನು ಬಾರಿಸೋದೂ ಇಲ್ಲ. ನಿನಗೆ ಮಾರೋದೂ ಇಲ್ಲ. ಸುಮ್ಮನೆ ಹೋಗು" ಎಂದರು. ಅವರಿಗೆ ಬಹಳ

ಬೇಸರ. ಹುಡುಗ "ಇದ್ಯಾತರ ಮಾತು ಸ್ವಾಮಿ ಇದು. ಇಲ್ಲದೇ ಇದ್ದರೆ ಬಾರಿಸಬೇಕು. ಇಲ್ಲದೇ ಇದ್ದರೆ ಬಾರಿಸೋನಿಗೆ ಕೊಡಬೇಕು. ಕಸಬು ದಾರನಲ್ಲದೇ ಇದ್ದರೆ ಪಿಟೀಲು ಇಟ್ಟುಕೊಂಡು ಏನುಮಾಡೋದು" ಎಂದು, "ನೋಡಿ ನಾನು ಬಾರಿಸುತ್ತೇನೆ" ಎಂತ ಪಿಟೀಲಿನ ಮೇಲೆ ಕಮಾನನ್ನು ಎಳೆದು ಸ್ವಲ್ಪ ಭೈರವೀ ರಾಗವನ್ನಾರಂಭಿಸಿದನು. ಸುಬ್ಬಣ್ಣ ನವರಿಗೆ ಕಲಾ ಉಪಾಸಕನ ಆವೇಶ ಬಂದಿತು. ಹುಡುಗನು ಬಾರಿಸಿ ಮುಗಿಸಿದ ಮೇಲೆ ಅವರು ಪಿಟೀಲನ್ನು ಹಿಂದಕ್ಕೆ ತೆಗೆದುಕೊಂಡು ಭೈರವಿ ಯನ್ನು ಬಾರಿಸಿದರು.

ಸುಬ್ಬಣ್ಣನವರು ಇಂಥ ರಾಗಗಳನ್ನು ಬಾರಿಸುವುದರಲ್ಲಿ ಒಂದು ಹಿಂದೂಸ್ಥಾನಿ ವರೇಕು ಬರುತ್ತಿತ್ತು. ಇದು ರಾಗಕ್ಕೆಲ್ಲಾ ಒಂದು ವಿಲಕ್ಷಣವಾದ ಕಳೆಯನ್ನು ಕಟ್ಟುತ್ತಿತ್ತು. ಹುಡುಗ ಇವರ ಭೈರವಿ ಯನ್ನು ಒಂದು ನಿಮಿಷ ಕೇಳಿ, "ಸ್ವಾಮಿ, ಷೋಕ್ ಮೇಲೆ ಬಾರಿಸು ತ್ತೀರಾ. ಪಕ್ಕಾ ಕಸಬುದಾರರು ನೀವು, ಭೇಷ್" ಎಂದು ಹೇಳಿ ಅವರು ಬಾರಿಸುತ್ತಿದ್ದುದನ್ನು ಆಮೇಲೆ ಸುಮ್ಮನೆ ನೋಡುತ್ತ ಕುಳಿತನು. ಇಷ್ಟರಲ್ಲೇ ಇನ್ನು ಕೆಲವು ಜನ ಒಂದು ಸೇರಿದರು. ಇದನ್ನು ನೋಡಿ ಸುಬ್ಬಣ್ಣನವರು ಜಾಗ್ರತೆ ರಾಗವನ್ನು ಮುಗಿಸಿ ಪಿಟೀಲನ್ನೂ ಬಟ್ಟೆಗಳನ್ನೂ ಎತ್ತಿಕೊಂಡು ಎದ್ದು ಹೊರಟುಹೋದರು.

ಸುಬ್ಬಣ್ಣನವರಿಗೆ ತಮ್ಮ ವಿಷಯದಲ್ಲಿ ಬಹಳ ಅಸಮಾಧಾನ ಉಂಟಾಗಿತ್ತು. ಎಲ್ಲವನ್ನೂ ಬಿಟ್ಟರೂ ಸಂಗೀತದ ಜಂಭವನ್ನು ಇನ್ನೂ ಬಿಡಲಿಲ್ಲ. ಯಾವನೋ ಒಬ್ಬ ಹುಡುಗ ಬಂದು ಒಂದು ಹಾಸ್ಯದ ಮಾತನ್ನಾಡಿದ್ದಕ್ಕೆ ತಾನು ಅದನ್ನು ಸಹಿಸಲಾರದೆ ತನ್ನ ಪಾಂಡಿತ್ಯವನ್ನು ಪ್ರದರ್ಶಿಸುವುದಕ್ಕೆ ಆರಂಭಮಾಡಿದೆನಲ್ಲಾ, ಇದೇನು ಅವಿವೇಕ ಎಂದು ಅವರಿಗೆ ಅಸಮಾಧಾನ. ಹಿಂದಿನ ಬದುಕಿನ ಎಲ್ಲವೂ ಹೋಯಿತು. ಹೆಂಡತಿ ಹೋದಳು. ಮಕ್ಕಳು ಹೋದರು. ತಾಯಿ ತಂದೆ ಅಕ್ಕ ಎಲ್ಲರೂ ಹೋದರು. ಈ ಪಿಟೀಲಿನ ಮೇಲೆ ಏನು ನನಗೆ ಇಷ್ಟು ಪ್ರೀತಿ. ಹೋದ ಎಲ್ಲದರ ಜೊತೆಗೆ ಇದೂ ಹೋಗಲಿ. ಇದು ಇದ್ದರಲ್ಲವೇ ಪಿಟೀಲು ನುಡಿಸೋಣ ಎಂಬ ಆಸೆ; ನುಡಿಸುವ ಜಂಭ. ಇದೂ ಹೋಗಲಿ. ಆಮೇಲೆ

ಆ ವ್ಯಸನವೂ ಇಲ್ಲ. ಹೀಗೆಂದು ಅವರು ಗೊತ್ತುಮಾಡಿಕೊಂಡರು. ದೂರದಲ್ಲಿ ಒಂದು ಸ್ನಾನಘಟ್ಟ. ಅಲ್ಲಿ ಜನ ಬಹಳ ಇರಲಿಲ್ಲ. ಅವರು ಅಲ್ಲಿಗೆ ಹೋಗಿ ಅಲ್ಲಿ ಇದ್ದ ಒಬ್ಬಿಬ್ಬರು ಹೊರಟುಹೋಗುವ ತನಕ ಕಾದಿದ್ದು ಯಾರೂ ಇಲ್ಲದ ವೇಳೆಯನ್ನು ನೋಡಿ ಪಿಟೀಲನ್ನು ಒಡೆಯೋಣ ಎಂದು ಕಲ್ಲಿನಮೇಲೆ ಎತ್ತಿದರು; ಮನಸ್ಸು ಬಾರದೆ ತಡೆದು ಕುಳಿತರು. ಎರಡು ನಿಮಿಷ ಕಳೆದಮೇಲೆ, ಈ ಚಪಲವನ್ನು ಬಿಡಬೇಕು ಎಂದು ನಿರ್ಧರಿಸಿ ನೀರೊಳಕ್ಕೆ ಇಳಿದು ದೇವರೇ ಎಲ್ಲವನ್ನೂ ಬಿಟ್ಟೆ, ಇದನ್ನೂ ಬಿಡುತ್ತೇನೆ, ಇನ್ನು ನನಗೆ ಶಾಂತಿಯನ್ನು ಕೊಡು ಎಂದು ಪಿಟೀಲನ್ನು ದೂರವಾಗಿ ನೀರೊಳಕ್ಕೆ ತೇಲುಬಿಟ್ಟರು; ಇಲ್ಲಿಗೆ ಋಣ ಮುಗಿಯಿತು ಎಂದು ಸೋಪಾನದ ಮೇಲೆ ಬಂದು ಕುಳಿತು ತಡೆಯಲಾರದೆ ಅತ್ತುಬಿಟ್ಟರು. ಈ ಮಾತನ್ನು ಹೇಳುವಾಗ ಆಮೇಲೆ ನನಗೆ "ನನ್ನ ಹೆಂಡತಿ ಹೋದಾಗಲೂ ಮಕ್ಕಳು ಹೋದಾಗಲೂ ಕೂಡ ನಾನು ಅಷ್ಟು ಅಳಲಿಲ್ಲ ನೋಡಿ, ಹಾಗೆ ಅತ್ತುಬಿಟ್ಟೆ. ನನ್ನ ಪ್ರಾಣ ತೆಗೆದು ಕಳಚಿ ಎಸೆದ ಹಾಗೆ ಆಗಿಹೋಯಿತು, ಆ ಪಿಟೀಲು ಎಸೆದಾಗ" ಎಂದರು.

ಆ ದಿನ ಈ ವಿಶ್ವಬಿದ್ಯಜ್ಞವು ಮುಗಿದಮೇಲೆ ಸುಬ್ಬಣ್ಣನವರು ಊರೊಳಕ್ಕೆ ಹೋಗಿ ಸ್ವಲ್ಪ ಹಣ್ಣು ತೆಗೆದುಕೊಂಡು ಬಂದು ದೇವರ ಎದುರಿಗೆ ಇಟ್ಟು ನಮಸ್ಕಾರಮಾಡಿ ಅದನ್ನು ತಿಂದು ಅಲ್ಲೇ ಇದ್ದರು. ಪಿಟೀಲು ಹೋಯಿತು. ಇನ್ನು ಇರುವುದು ಬಟ್ಟೆಮಾತ್ರ. ಅಂದಿನ ರಾತ್ರಿ ಅವರು ಮಲಗಿ ಮತ್ತೆ ಮತ್ತೆ ಮನಸ್ಸಿನಲ್ಲಿ ಪಿಟೀಲನ್ನೇ ಕಾಣು ತ್ತಿದ್ದರು. ಆದರೆ ಹಿಂದಿನ ರಾತ್ರಿಗಿಂತ ಚೆನ್ನಾಗಿ ನಿದ್ದೆಹತ್ತಿತು. ರಾತ್ರಿ ಎಚ್ಚೆತ್ತಾಗ "ನಾನು ಶುದ್ಧ ಬೆಪ್ಪ. ಪಿಟೀಲು ಹತ್ತಿರ ಇದ್ದರೆ ಯಾವಾಗ ಲಾದರೂ ಒಂದು ದೇವರನಾಮವನ್ನು ನುಡಿಸಬಹುದಾಗಿತ್ತು. ಒಂದು ರಾಗ ಆಲಾಪನೆ ಮಾಡಬಹುದಾಗಿತ್ತು. ಈಗ ದೇವರಿಗೆ ಹೀಗೆ ಸೇವೆ ಮಾಡುವುದಕ್ಕೆ ಇಲ್ಲದೇ ಹೋಯಿತು" ಎಂದುಕೊಂಡರು. ಬಂಗಾಳಕ್ಕೆ ಹೋದ ಹೊಸದರಲ್ಲಿ ತೆಗೆದುಕೊಂಡ ಪಿಟೀಲು ಅದು; ಅನೇಕ ಕಚೇರಿ ಗಳಲ್ಲಿ ಬಾರಿಸಿದ್ದು; ತನ್ನ ಜೀವಮಾನವೆಲ್ಲಾ ಜೊತೆಯಲ್ಲಿ ಇದ್ದದ್ದು. ಅದರ ವಿಷಯದಲ್ಲಿ ಅವರಿಗೆ ಆ ಮಮತೆ ಇದ್ದದ್ದು ಏನೂ ಆಶ್ಚರ್ಯವಲ್ಲ.

ಮಾರನೆಯ ದಿನ ಬೆಳಿಗ್ಗೆ ಅವರು ಏಳುವುದು ಸ್ವಲ್ಪ ಸಾವಕಾಶವಾಯಿತು. ಎದ್ದು ನೋಡಿದರೆ ಪಿಟೀಲು ಪಕ್ಕದಲ್ಲೇ ಇದೆ. ಇದೇನು ನಿದ್ದೆಕಣ್ಣು ಎಂದು ಕಣ್ಣೊರಸಿಕೊಂಡು ಮತ್ತೆ ನೋಡಿದರು. ಅದು ಪಿಟೀಲು—ತಮ್ಮ ಪಿಟೀಲು. ಇದೇನು ಮಾಯೆ ಎಂದು ಸುಬ್ಬಣ್ಣನವರು ಆಶ್ಚರ್ಯದಿಂದಲೂ, ಆದರೆ ಪಿಟೀಲು ಬಂತಲ್ಲಾ ಎಂಬ ಸಂತೋಷದಿಂದಲೂ, ಅದನ್ನು ಆದರದಿಂದ ಎತ್ತಿಕೊಂಡರು. ಆ ವೇಳೆಗೆ ಹಿಂದಿನ ದಿನ ಬಂದಿದ್ದ ಹುಡುಗ ಕಂಬದ ಮರೆಯಿಂದ ಹತ್ತಿರಕ್ಕೆ ಬಂದನು. ಅಡ್ಡಬಿದ್ದು ನಮಸ್ಕಾರಮಾಡಿ—"ನೀವು ನನಗೆ ಗುರುಗಳು. ನಾನು ನಿನ್ನೆ ತಮ್ಮನ್ನು ಹಾಗೆ ಮಾತನಾಡಿಸಿದ್ದು ತಪ್ಪು. ಇಂಥ ವಿದ್ಯೆ ಇದೆ ಎಂತ ತಿಳಿಯಲಿಲ್ಲ. ತಪ್ಪು ಮಾಡಿಬಿಟ್ಟೆ. ಮಾಫ್ ಮಾಡಬೇಕು" ಎಂದನು. ಸುಬ್ಬಣ್ಣನವರು "ನೀನೇನು ಹೇಳಿದೆಯಪ್ಪ. ನನ್ನನ್ನು ಏನೂ ಹೇಳಲಿಲ್ಲ. ಬಿಡು" ಎಂದರು. ಹುಡುಗ "ಗುರುಗಳೇ, ನೀವು ಒಬ್ಬರೇ ಬಂದಿರುವಹಾಗಿದೆ. ಹತ್ತಿರ ಯಾರೂ ಇಲ್ಲ. ಅಪ್ಪಣೆಯಾದರೆ ನಾನು ಹತ್ತಿರ ಇರುತ್ತೇನೆ. ಚಾಕರಿ ಮಾಡುತ್ತೇನೆ" ಎಂದನು. ಸುಬ್ಬಣ್ಣನವರು—"ಅಯ್ಯೋ, ನನಗೆ ಚಾಕರಿ ಯಾರೂ ಮಾಡಬೇಕಾದ್ದಿಲ್ಲವಪ್ಪಾ. ನಾನೇ ಗುಲಾಮ. ನನಗೆ ಚಾಕರರ್ಯಾಕೆ" ಎಂದರು.

ಈ ಹುಡುಗ ಈ ಪಿಟೀಲನ್ನು ಹೊಳೆಯಿಂದ ತಂದಿರಬೇಕು, ಇದನ್ನು ನನ್ನ ಹತ್ತಿರ ತಂದು ಇಟ್ಟವನು ಇವನೇ, ಇವನಿಂದ ನನಗೊಂದು ಉಪಕಾರವಾಯಿತು—ಎಂಬ ಭಾವನೆಯಿಂದ ಸುಬ್ಬಣ್ಣನವರ ಮಾತು ಹಿಂದಿನ ದಿನದಷ್ಟು ಒರಟಾಗಿರಲಿಲ್ಲ. ಅವರ ಮನಸ್ಸು ಸ್ವಲ್ಪ ನಯವಾಗಿತ್ತು. ಅವರು ಹಾಗೆಯೇ ಕುಳಿತಿದ್ದರು. ಹುಡುಗನೂ ಕುಳಿತಿದ್ದನು. ಅವನನ್ನು ಹೊರಟುಹೋಗು ಎನ್ನುವುದಕ್ಕೆ ಮನಸ್ಸು ಬರಲಿಲ್ಲ. ದಾಕ್ಷಿಣ್ಯ. ಸ್ವಲ್ಪ ಹೊತ್ತಿನ ಮೇಲೆ ಹುಡುಗ "ಸ್ವಾಮಿ, ನನ್ನ ಹೆಸರು ವೆಂಕಟರಮಣ. ನಾವು ನಟುವರು. ನಿಮಗೆ ಇಷ್ಟವಿದ್ದಾಗ ತಿರುಗಿ ಬರುತ್ತೇನೆ. ಅದಕ್ಕೆ ಮುಂಚೆ ಏನಾದರೂ ಬೇಕಾದರೆ ನಮ್ಮ ಮನೆಗೆ ಬಂದರೂ ಸರಿಯೆ. ಬರುವವರ ಕೈಯಲ್ಲಿ ಯಾರ ಕೈಯಲ್ಲಾದರೂ ಹೇಳಿಕಳುಹಿಸಿದರೂ ಸರಿಯೆ. ತರುತ್ತೇನೆ" ಎಂದು ಎದ್ದು

ಹೊರಟನು. ಸುಬ್ಬಣ್ಣನವರಿಗೆ ಅವನನ್ನು ಇರು ಎಂದು ಹೇಳಬೇಕೆಂದು ಒಂದು ಯೋಚನೆ. ಹೋಗಲಿ, ಯಾರು ಇನ್ನು ಇಲ್ಲಿ ಗುರುತು ಪರಿಚಯಗಳನ್ನು ಮಾಡಿಕೊಂಡು ತಿರುಗಿ ಕಷ್ಟಪಡುವವರು ಎಂದು ಇನ್ನೊಂದು ಯೋಚನೆ. ಈ ಮಧ್ಯೆ ಅವರು ಏನೂ ಹೇಳದೆ ಸುಮ್ಮನೆ ಇದ್ದರು.

ಮಧ್ಯಾಹ್ನದ ಹೊತ್ತಿಗೆ ವೆಂಕಟರಮಣ ಮತ್ತೆ ಬಂದ. ಸುಬ್ಬಣ್ಣನವರು ಸ್ನಾನ ಮುಗಿಸಿಕೊಂಡು ಕುಳಿತುಕೊಂಡಿದ್ದರು. ಅವರಿಗೆ ಆ ಮಧ್ಯೆ—ಇದೇನು ವ್ಯರ್ಥ ಜನ್ಮ. ಇನ್ನೊಬ್ಬರಿಗೆ ಉಪಕಾರವಿಲ್ಲದೆಯೇ ಹೋಗಬೇಕೇ. ಉಪಕಾರ ಬೇಡ. ಸಾಲ ತೀರಿಸುವುದೂ ಬೇಡವೇ. ಈ ಹುಡುಗ ನನಗೆ ಪಿಟೀಲನ್ನು ತಂದುಕೊಡಬೇಕಾದದ್ದು ಏನಿತ್ತು. ಅವನಿಗೆ ಬದಲಿಗೆ ನಾಲ್ಕು ಪಾಠವಾದರೂ ಹೇಳಿ ಈ ಋಣ ತೀರಿಸಿಕೊಳ್ಳಬೇಕು—ಎಂದು ಯೋಚನೆ ತಲೆದೋರಿತು. ವೆಂಕಟರಮಣ ಬಂದು ನಮಸ್ಕಾರಮಾಡಿ ನಿಂತಿರಲು ಅವರು ಅವನಿಗೆ ಕುಳಿತುಕೊ ಎಂದು ಸನ್ನೆ ಮಾಡಿದರು. ಅಲ್ಲದೆ ನೀಲಾಸಾನಿಯ ಜ್ಞಾಪಕದಿಂದ ಅವರಿಗೆ ಇವನ ಮೇಲೆ ಸ್ವಲ್ಪ ಹೆಚ್ಚು ಆದರ. ಅವಳೂ ನಟುವಳು. ಈ ಹುಡುಗನೂ ನಟುವನು. ಇಂಥ ಸಂಬಂಧಗಳಿಂದ ಹೃದಯದಲ್ಲಿ ಸ್ನೇಹವು ಮೊಳೆಯುವುದು. ಅವರು ಅವನನ್ನು ತಾವಾಗಿಯೇ ನೀನು ಪಿಟೀಲು ಚೆನ್ನಾಗಿ ಬಾರಿಸುತ್ತೀಯೆ ಎಂದರು. ಅವನು "ನಿಮ್ಮ ಆಶೀರ್ವಾದ. ನಾಲ್ಕು ಸ್ವರ ಕಲಿತಿದ್ದೇನೆ. ನಿಮ್ಮ ವಿದ್ಯೆಯ ಮುಂದೆಯೇ. ಇಲ್ಲಿ ಯಾರೂ ಇಲ್ಲ ನಿಮ್ಮ ಜೊತೆಗೆ ಬಾರಿಸುವವರು" ಎಂದನು. "ನಿನಗೆ ಬೇಕಾದಾಗ ನಿನ್ನ ಪಿಟೀಲನ್ನು ತಂದು ನುಡಿಸು ಕೇಳೋಣ." "ಅಪ್ಪಣೆ. ಕೊಂಚ ದಿನ ಹೇಳಿಕೊಟ್ಟರೆ ಗುರುಗಳ ಅನುಗ್ರಹದಿಂದ ಈ ಕಡೆಯವರನ್ನೆಲ್ಲಾ ಸೋಲಿಸಿಬಿಡುತ್ತೇನೆ." ಸುಬ್ಬಣ್ಣನವರಿಗೆ ಈ ಹುಡುಗನ ಉತ್ಸಾಹವು ದೂರದ ಮೋಡದಲ್ಲಿಯ ಗುಡುಗಿನ ಧ್ವನಿಯಂತೆ ತಮ್ಮ ಚಿಕ್ಕಂದಿನ ಉತ್ಸಾಹವನ್ನು ನೆನಪಿಗೆ ತಂದಿತು. ಅವರು ಏನೂ ಹೇಳಲಿಲ್ಲ. ವೆಂಕಟರಮಣನು— "ಊಟಕ್ಕೆ ಏರ್ಪಾಡು ಮಾಡಿದೇನೆ ದಯಮಾಡಿಸಬೇಕು. ತಾವು ಸ್ಮಾರ್ತರು. ನಾನು ಸ್ಮಾರ್ತರ ಮನೆಯಲ್ಲೇ ಹೇಳಿದೇನೆ. ಅವರು

ಆಚಾರಶೀಲರು. ಅವರನ್ನು ದೀಕ್ಷಿತರು ಎಂದು ಕರೆಯುತ್ತಾರೆ. ಅವರ ಮನೆ'' ಎಂದನು. ಸುಬ್ಬಣ್ಣನವರು ಇದೇಕೋ ಸಾಲ ದೊಡ್ಡದಾಗುವ ಸ್ಥಿತಿ ಬಂದಿದೆ ಎಂದುಕೊಂಡು, ''ಅಪ್ಪಾ, ನನಗಿದೆಲ್ಲಾ ಬೇಡ. ನಿನಗೆ ಬೇಕಾದಾಗ ಪಿಟೀಲು ತಾ. ಕಾಲು ಗಂಟೆ ಬಾರಿಸು. ಕೇಳುತ್ತೇನೆ. ಇನ್ನೇನೂ ನಿನ್ನಿಂದ ನನಗೆ ಬೇಡ'' ಎಂದರು. ವೆಂಕಟರಮಣನು ಇನ್ನೂ ಇವರಿಗೆ ಸಮಾಧಾನವಿಲ್ಲ ಎಂದು ತಿಳಿದು ಎದ್ದು ನಮಸ್ಕಾರ ಮಾಡಿ ಹೊರಟುಹೋದನು.

ಆದರೆ ವೆಂಕಟರಮಣನು ಹಿಂದಿನ ದಿನದ ತನ್ನ ನಡತೆಯಿಂದ ಸುಬ್ಬಣ್ಣನವರನ್ನು ಪುನಃ ಪ್ರಪಂಚಕ್ಕೆ ಕಟ್ಟಿಹಾಕಿದ್ದನು. ಆ ದಿನ ಅವರು ಕೋಪಿಸಿಕೊಂಡು ಹೊರಟುಹೋದಾಗ ಈತ ಏನು ಮಾಡು ತ್ತಾರೋ ಎಂದು ಅವನು ದೂರದಲ್ಲಿ ಹಿಂದೆಯೇ ಹೋದನು. ಅವರು ಪಿಟೀಲನ್ನು ಒಡೆಯುವುದಕ್ಕೆ ನೋಡಿದ್ದು, ನೀರಿನೊಳಕ್ಕೆ ಇಳಿದು ಪಿಟೀಲನ್ನು ತೇಲಿಸಿದ್ದು, ಮೆಟ್ಟಿಲ ಮೇಲೆ ಕುಳಿತು ಸುಮ್ಮನೆ ಅತ್ತದ್ದು, ಎಲ್ಲವನ್ನೂ ನೋಡಿದನು. ಹುಡುಗನ ಮನಸ್ಸು—ಅವನಿಗೆ ಅಯ್ಯೋ ಎನಿಸಿತು. ''ಎಂಥ ಪಿಟೀಲು, ಬಿಸಾಡಬೇಕು ಎಂದರೆ ಕಸಬುದಾರನಿಗೆ ಕಷ್ಟವಲ್ಲವೇ? ಇವರಿಗೆ ತಾನು ಮಾಡಿದ್ದು ಎಷ್ಟು ಬೇಸರವಿರಬೇಕು. ಆಗಲಿ ತಿರುಗಿ ಸಮಾಧಾನ ಮಾಡೋಣ.'' ಎಂದು ನೀರೊಳಕ್ಕೆ ಹೋಗಿ ಅವನು ಪಿಟೀಲನ್ನು ಎತ್ತಿಕೊಂಡನು. ಆ ದಿನವೆಲ್ಲಾ ಅವನು ದೂರದಿಂದ ಹೊಂಚುಹಾಕಿ ಸುಬ್ಬಣ್ಣನವರನ್ನು ನೋಡುತ್ತಾ ಸಮಯ ವನ್ನು ಕಾಯುತ್ತಿದ್ದನು. ಸರಿಹೋಗಲಿಲ್ಲ. ಮಾರನೆಯ ದಿನ ಎಚ್ಚತ್ತಾಗ ಅದನ್ನು ಹತ್ತಿರ ಇಟ್ಟು ಅವರಿಗೆ ಅದನ್ನು ನೋಡಿ ಸಂತೋಷವಾದಂತೆ ಕಂಡರೆ ಮಾತನಾಡಿಸುವುದು, ಇಲ್ಲದೆ ಇದ್ದರೆ ಸುಮ್ಮನೆ ಹೊರಟು ಹೋಗುವುದು, ಎಂದು ಯೋಚಿಸಿದನು. ಹಾಗೆಯೇ ಮಾಡಿದನು. ಮುಂದಕ್ಕೆ ನಡೆದದ್ದನ್ನು ಈ ಮೊದಲೇ ಹೇಳಿದೆ. ಅಂತೂ ಪಿಟೀಲನ್ನು ಒಡೆಯಲಾರದೆ ನೀರಿನೊಳಕ್ಕೆ ಹಾಕಿದ ಸ್ವಲ್ಪದ ಪ್ರೀತಿಯ ಮೂಲಕ ಸುಬ್ಬಣ್ಣನವರ ಮನಸ್ಸಿನಲ್ಲಿ ಒಂದು ದಾಕ್ಷಿಣ್ಯ ಹುಟ್ಟುವುದಕ್ಕೂ, ಅವರು ವೆಂಕಟರಮಣನಿಗೆ ಪಾಠ ಹೇಳುವುದಕ್ಕೂ ಸಂದರ್ಭ ಒದಗಿತು.

ಭೂದೇವಿಯೂ ವೈಕುಂಠನಾಥನ ಧರ್ಮಪತ್ನಿ. ನಮಗವಳು ಮಾತೆ. ಮಕ್ಕಳಾದ ನಾವು ಕೋಪದಿಂದ ಹಠಮಾಡಿ ಒಲ್ಲೆನೆಂದು ದೂರ ಹೋಗನೋಡಿದರೆ ಅವಳು ನಮ್ಮನ್ನು ಹೀಗೆ ಉಪಾಯವಾಗಿ ಸಮಾಧಾನ ಮಾಡಿ ಹತ್ತಿರಕ್ಕೆ ಕರೆದುಕೊಳ್ಳುವಳು. ಸುಬ್ಬಣ್ಣನವರಿಗೂ ತೊರೆಯು ಪುರದ ಜೀವನಕ್ಕೂ ಆ ದಿನ ಹೀಗೆ ಆರಂಭಿಸಿದ ಸಂಬಂಧವು ತಕ್ಕಮಟ್ಟಿಗೆ ಬೆಳೆಯಿತು. ಸುಬ್ಬಣ್ಣನವರೇನೋ ಯಾರಿಂದ ಏನೊಂದನ್ನೂ ಅಪೇಕ್ಷಿ ಸದೆ ತಮ್ಮಷ್ಟಕ್ಕೆ ಎಲ್ಲೋ ಇರುತ್ತ ಹೇಗೋ ಕಾಲ ಕಳೆಯುತ್ತಿದ್ದರು. ಆದರೂ ಅವರು ಎಲ್ಲರಿಗೂ ಬೇಕಾದವರಾದರು. ಅವರಿಂದ ಅನೇಕರು ಪಿಟೀಲನ್ನು ಕಲಿತರು. ಅವರು ವಿಶ್ವ ಸಂಸಾರದಲ್ಲಿ ಒಂದು ಕೆಲಸವನ್ನು ಒಪ್ಪಿಕೊಂಡಹಾಗಾಯಿತು. ಎಸೆದಿದ್ದ ಪಿಟೀಲನ್ನು ಹಿಂದಕ್ಕೆ ಕೊಡಿಸಿ ದ್ದನ್ನು ನೋಡಿದರೆ ದೇವರಿಗೆ ಈ ಪಿಟೀಲನ್ನು ಕೇಳುವುದರಲ್ಲಿ ಸುಖವಿರ ಬೇಕು ಎಂದು ಅವರು ಆಗಾಗ ದೇವಸ್ಥಾನದಲ್ಲಿ ಕುಳಿತು ಪಿಟೀಲನ್ನು ಬಾರಿಸುವರು. ಹೀಗೆ ಅವರಿಗೆ ಕಷ್ಟಪಡಲಿ ಸುಖಪಡಲಿ ಜೀವನವು ದೇವರ ಸೇವೆ ಎನ್ನುವ ಭಾವನೆಯು ಮನಸ್ಸಿನಲ್ಲಿ ಮೆಲ್ಲಮೆಲ್ಲನೆ ಊರಿ ಎಲ್ಲವನ್ನೂ ದೈವೇಚ್ಛೆಗೆ ಸಮರ್ಪಿಸುವ ಭಕ್ತಿಯೊಂದು ಅವರಲ್ಲಿ ನಿಶ್ಚಲ ವಾಯಿತು.

## ೧೦

ನಮ್ಮ ಮಾವನವರಿಗೆ ೧೯೧೦ರಲ್ಲಿ ತೊರೆಯುಪುರದ ಸುಬೇದಾರಿ ಕೆಲಸವಾಯಿತು. ಆಗ ಅವರು ನನಗೆ ಇನ್ನೂ ಭಾವನವರಾಗಿದ್ದರು. ಮಾವನಾದದ್ದು ಈಚೆಗೆ. ಅವರಿಗೆ ಆಗ್ಗೆ ಇಬ್ಬರು ಹೆಣ್ಣುಮಕ್ಕಳು. ದೊಡ್ಡವಳಾದ ಲಲಿತಾ ಈಗ ನನಗೆ ಗೃಹಿಣಿಯಾಗಿದ್ದಾಳೆ. ನಮ್ಮ ಮಾವ ನವರೂ ಸ್ವಲ್ಪ ವಿಶೇಷ ತರದ ಮನುಷ್ಯರು. ಬರೆದರೆ ಅವರದೇ ಒಂದು ಕತೆಯಾಗುವುದು. ಆದರೆ ಅದಕ್ಕೆಲ್ಲ ಇಲ್ಲಿ ಅವಕಾಶವಿಲ್ಲ. ಅವರಿಗೆ ಸಂಗೀತದಲ್ಲಿ ಬಹಳ ಅಭಿರುಚಿ. ಅವರೂ ಸ್ವಲ್ಪಮಟ್ಟಿಗೆ ಚೆನ್ನಾಗಿ ಪಿಟೀಲನ್ನು ಬಾರಿಸುವರು. ಪಿಟೀಲು ಚೆನ್ನಾಗಿ ಬಾರಿಸುತ್ತೀರಿ ಎಂತ ನೀವು ಹೇಳಿದರೆ, ಸರಿಸರಿ ನನಗೇನು ಬರುತ್ತದೆ ಎನ್ನುವರು. ನಿಮಗೆ ಇನ್ನೂ ಚೆನ್ನಾಗಿ ಬರುವುದಿಲ್ಲ ಎಂದರೆ, "ಸರಿ, ನಿಮಗೆ ತಿಳಿಯದು.

ನೋಡಿ. ಈ ಸಂಗತಿ ಭೇಷ್ ಸಂಗತಿ. ಎಂಥಾ ಪಂಡಿತರಿಗೂ ಬರೋದಿಲ್ಲ'' ಎಂದು ಒಂದು ಸಂಗತಿಯನ್ನು ನುಡಿಸುವರು. ಅದು ನಿಜ. ಸಾಮಾನ್ಯವಾಗಿ ಅಂಥ ಲಟುಕು ಅವರ ಸ್ವಂತದ್ದಾಗಿರುವುದು. ಎಂದರೆ ನೀವು ಹೇಳುವುದಕ್ಕೆ ಪ್ರತಿಹೇಳುವುದೇ ಅವರ ವಾಡಿಕೆ. ನಿಮ್ಮ ಸಂಗಡ ಜಗಳವಾಡುವುದಕ್ಕೆಂದಲ್ಲ ಅವರು ಹಾಗೆ ಮಾಡುವುದು. ಅವರ ಮನಸ್ಸು ಆಗಿರುವ ರೀತಿಯೇ ಹಾಗೆ. ಅಧಿಕಾರ ಚಲಾಯಿಸಿರುವ ಅನೇಕರಿಗೆ ಈ ರೀತಿಯ ಮನೋವೃತ್ತಿ ಬರುತ್ತದೆ. ಸಾಲದ್ದಕ್ಕೆ ಇವರ ಸ್ವಭಾವವೇ ಹಾಗೆ. ತೊರೆಯ ಪುರಕ್ಕೆ ಹೋದ ಕೆಲವು ದಿನದಲ್ಲಿ ನಮ್ಮ ಮಾವ ಒಂದು ದಿನ ಕಛೇರಿಗೆ ಹೋಗುತ್ತಿರಬೇಕಾದರೆ ಯಾರೋ ಒಬ್ಬರ ಮನೆಯಲ್ಲಿ ಪಿಟೀಲು ನುಡಿಸುತ್ತಿದ್ದದು ಕೇಳಿಸಿತು; ಬಹಳ ಸ್ವಾರಸ್ಯವಾಗಿತ್ತು. ನಮ್ಮ ಮಾವ ಹತ್ತಿರ ಇದ್ದವರನ್ನು ಅದು ಯಾರು ಪಿಟೀಲು ಬಾರಿಸುತ್ತಿರುವವರು ಎಂದು ಕೇಳಿದರು. ಬಾರಿಸುತ್ತಿದ್ದವನು ವೆಂಕಟರಮಣ. ಆ ದಿನ ಸಾಯಂಕಾಲ ಅವರು ವೆಂಕಟರಮಣನನ್ನು ಮನೆಗೆ ಕರೆಯಿಸಿ ಒಂದು ಗಂಟೆ ಹೊತ್ತು ಅವನು ಬಾರಿಸಿದ್ದನ್ನು ಕೇಳಿ, ಒಳ್ಳೇ ಪಾಠವಾಗಿದೆ, ಚೆನ್ನಾಗಿ ಬಾರಿಸುತ್ತೀಯೆ ಎಂದರು. ಹತ್ತಿರ ಇದ್ದವರು ''ಇವರ ಪಿಟೀಲು ಏನು ಹೇಳೋದು. ಸುಬ್ಬಣ್ಣನವರು ಬಾರಿಸಿದಾಗ ಕೇಳಬೇಕು'' ಎಂದರು. ''ಸುಬ್ಬಣ್ಣನವರು ಯಾರು?'' ''ಅವರು ನಮ್ಮ ಗುರುಗಳು.'' ''ಈಗ ಇಲ್ಲಿದಾರೆಯೋ?'' ''ಇದಾರೆ.'' ''ಅವರನ್ನು ಬರಹೇಳಿ. ಅವರು ಬಾರಿಸುವುದನ್ನು ಕೇಳೋಣ.'' ಅವರು ಹಾಗೆಲ್ಲಾ ಬರುವುದಿಲ್ಲವೆಂದೂ ಅವರು ಯಾವ ತರದ ಮನುಷ್ಯನೆಂದೂ ಅಲ್ಲಿದ್ದವರು ನಮ್ಮ ಮಾವನವರಿಗೆ ಹೇಳಿದರು.

ಯಾರಾದರೂ ತಮ್ಮ ಹತ್ತಿರ ಬರುವುದಿಲ್ಲವೆಂದು ಹೇಳಿದರೆ ನಮ್ಮ ಮಾವನವರು ಅವರನ್ನು ಮತ್ತೆ ಕೇಳುವ ಸ್ವಭಾವದವರಲ್ಲ. ಅದನ್ನು ನೀವು ಜಂಭವೆಂದು ಕರೆಯಬಹುದು; ನಾನು ಹಾಗೆ ಕರೆಯುವುದಿಲ್ಲ. ಇದು ದೊಡ್ಡಮನುಷ್ಯರಲ್ಲಿರುವ ಒಂದು ರೀತಿಯ ಆತ್ಮಗುರುತಾ. ನಮ್ಮ ಮಾವನವರು ಈ ಸುಬ್ಬಣ್ಣ ಒಪ್ಪಿದರೆ ಅವರಿಂದ ಲಲಿತಾಗೆ ಪಿಟೀಲು ಹೇಳಿಸಬಹುದು ಎಂದು ಯೋಚಿಸಿದರು; ಆದರೆ ಅದಕ್ಕೆ ಅವಕಾಶ

ವಿಲ್ಲವಾಯಿತು ಎಂದು ಸುಮ್ಮನಾದರು. ಹೀಗಿರುವಲ್ಲಿ ಇನ್ನೊಂದು ದಿನ ಇವರು ಕಛೇರಿಗೆ ಹೋಗುವಾಗ ಸುಬ್ಬಣ್ಣನವರು ಯಾರ ಮನೆಯ ಜಗಲಿಯ ಮೇಲೆಯೋ ಕುಳಿತು ಪಾಠಹೇಳುತ್ತ ಹುಡುಗರಿಗೆ ತೋರಿಸುವುದಕ್ಕೆ ಪಿಟೀಲು ನುಡಿಸುತ್ತಿದ್ದರು. ಹೀಗೆ ನುಡಿಸುವುದರಲ್ಲಿ ರುಚಿಹತ್ತಿ ರಾಗವನ್ನು ತೀರಾ ಆಲಾಪನೆಮಾಡುವುದಕ್ಕೆ ಮೊದಲುಮಾಡಿದರು. ಅವರು ರಾಗದ ಮಧ್ಯೆ ಇರುವಾಗ ಅದು ನಮ್ಮ ಮಾವನವರ ಕಿವಿಗೆ ಬಿತ್ತು. ಆ ಸ್ಪಷ್ಟವಾದ ವಿಚಿತ್ರವಾದ ರಸಭಾವ ಪರಿಪೂರ್ಣವಾದ ಗಾನದ ಆ ಸ್ವಲ್ಪ ಭಾಗವನ್ನು ಕೇಳಿ ನಮ್ಮ ಮಾವನವರಿಗೆ ಮನಸ್ಸು ಸೋತಿತು. ಅವರು ಆಗ ಕಛೇರಿಗೆ ಹೋಗಿ ಆ ರಾಗದ ವಿಚಾರ ಯೋಚನೆಮಾಡುತ್ತಿದ್ದು ಬೇಗನೆ ಕೆಲಸ ಮುಗಿಸಿ ಮನೆಗೆ ಬಂದರು. ಗುಮಾಸ್ತರೊಬ್ಬರನ್ನು ಕರೆದು, ಹೋಗಿ ಆ ಸುಬ್ಬಣ್ಣ ಎನ್ನುವರನ್ನು ಹೇಗಾದರೂ ಕರೆದುಕೊಂಡು ಬನ್ನಿ, ಎಂದು ಕಳುಹಿಸಿದರು.

ಗುಮಾಸ್ತರು ಬಂದು ಸುಬ್ಬಣ್ಣನವರನ್ನು—"ಸ್ವಾಮಿ, ನಿಮ್ಮ ಸಂಗಡ ಸ್ವಲ್ಪ ಮಾತನಾಡಬೇಕು" ಎಂದರು. "ಏನು ಮಾತು." "ತಮ್ಮನ್ನು ಸುಬೇದಾರರು ಸ್ವಲ್ಪ ಬರಹೇಳುತ್ತಾರೆ. ಬಹಳ ಒಳ್ಳೆಯವರು. ಒಂದು ಅರ್ಧ ಗಂಟೆ ಪಿಟೀಲು ಬಾರಿಸಬೇಕಂತೆ." ಸುಬ್ಬಣ್ಣನವರು ಏನೂ ಮಾತೇ ಆಡಲಿಲ್ಲ. ಅವರಿಗೆ ಇದೆಲ್ಲ ಇಷ್ಟವಿಲ್ಲ. "ಎಲ್ಲವನ್ನೂ ಬಿಟ್ಟವನು ಈಗ ಪಾಠಹೇಳುವ ಸಂಸಾರಕ್ಕೆ ಸಿಕ್ಕಿಬಿದ್ದೆ. ಇನ್ನು ದೊಡ್ಡಮನುಷ್ಯರ ಮನೆಯಲ್ಲಿ ಹೋಗಿ ಬಂದು ಆ ದೊಡ್ಡಸ್ತಿಕೆಗೆ ಸಿಕ್ಕಿಬೀಳುವುದು. ಇದು ನನಗೆ ಬೇಡ" ಎಂದು ಅವರು ಯಾವ ಮಾತನ್ನೂ ಆಡದೆ ಸುಮ್ಮನೆ ಇದ್ದರು. ಗುಮಾಸ್ತರು ಬಹಳ ಬಲವಂತಮಾಡಿದ ಮೇಲೆ—"ನಾನು ಅಷ್ಟು ದೊಡ್ಡವರ ಹತ್ತಿರ ಬರಲಾರೆ. ಸುಬೇದಾರರಲ್ಲಿ ನಾನು ಕ್ಷಮಾಪಣೆ ಬೇಡಿಕೊಂಡೆ ಎಂದು ಹೇಳಿ" ಎಂದರು. ಗುಮಾಸ್ತರು ಹಿಂದಕ್ಕೆ ಬಂದು ಸುಬೇದಾರರಿಗೆ ತಿಳಿಸಿದರು.

ನಮ್ಮ ಮಾವನವರಿಗೆ ಸ್ವಲ್ಪ ಕೋಪವೇ ಬಂದಿತು. ನಾನು ಹೇಳಿ ಕಳುಹಿಸಿದರೂ ಬರುವುದಿಲ್ಲವೆನ್ನುವಷ್ಟು ಜಂಭವೇ ಈ ಹಾಡುಗಾರನದು ಎಂತ ಅವರ ಯೋಚನೆ. ರಾಜರ ವೇಷ ಹಾಕಿ ರಂಗರಾಯ ನಾಟಕದಲ್ಲಿ

ತಾನು ರಾಜನಂತೆ ನಡೆಯಬೇಕು. ನಾವೂ ಸಂಸಾರದಲ್ಲಿ ಕೆಲವರು ದೊಡ್ಡಮನುಷ್ಯನ ವೇಷ ಹಾಕಿ ದೊಡ್ಡಮನುಷ್ಯನೆಂದುಕೊಳ್ಳುತ್ತೇವೆ; ಚಿಕ್ಕಮನುಷ್ಯನ ವೇಷ ಹಾಕಿ ಚಿಕ್ಕಮನುಷ್ಯ ಎಂದುಕೊಳ್ಳುತ್ತೇವೆ. ಈ ಚಿಕ್ಕಮನುಷ್ಯ ಎಂದುಕೊಂಡವನು ತಗ್ಗಿ ನಡೆದುಕೊಳ್ಳುತ್ತಾನೆ. ದೊಡ್ಡ ಮನುಷ್ಯ ಎಂದುಕೊಂಡವನು ದರ್ಪ ಮಾಡುತ್ತಾನೆ. ಚಿಕ್ಕಮನುಷ್ಯನ ವೇಷದವನು ತಗ್ಗಿ ನಡೆಯದಿದ್ದರೆ ದೊಡ್ಡಮನುಷ್ಯನ ವೇಷದವನಿಗೆ ಕೋಪ. ಆದರೆ ನೋಡಿ, ಜವಾನ ಪಾರ್ಟಿನ ಜೀವಂಡರಾಯ ರಾಜಾ ಪಾರ್ಟಿನ ರಂಗರಾಯನಿಗೆ ನಾಟಕದಲ್ಲಿಂತೂ ನಮಸ್ಕಾರಮಾಡಬೇಕು; ಬೀದಿಯಲ್ಲಿ ಬಂದಾಗಲೋ? ಆಗಲೂ ದಾಸೋಹಂ ಎನ್ನಬೇಕೇ? ಒಂದೊಂದು ಸಂದರ್ಭದಲ್ಲಿ ಏನಾಗುತ್ತದೆ ಎಂದರೆ ರಂಗರಾಯ ಇನ್ನೂ ನಾಟಕದಲ್ಲೇ ಇರುತ್ತಾನೆ. ಜೀವಂಡರಾಯ ಹೊರಗೆ ಬಂದಿರುತ್ತಾನೆ. ಆಗ ತೊಂದರೆ. ಇಲ್ಲಿ ಆಗಿದ್ದದ್ದೂ ಅದೇ. ನಮ್ಮ ಮಾವನವರು ಇನ್ನೂ ಸಂಸಾರದಲ್ಲಿ ಇರುವವರು. ಸುಬ್ಬಣ್ಣ ಸಂಸಾರವನ್ನು ಬಿಟ್ಟವರು. ಸುಬ್ಬಣ್ಣ ತಮಗೆ ಮರ್ಯಾದೆ ತೋರಿಸಲಿಲ್ಲವೆಂದು ನಮ್ಮ ಮಾವನವರು ಕೋಪಿಸಿ ಕೊಳ್ಳುವುದು ಸಹಜ. ನಾವು ಯಾರಾದರೂ ಅಂಥ ಸಂದರ್ಭದಲ್ಲಿ ಕೋಪಿಸಿಕೊಳ್ಳುವುದೇ ನಿಜ. ಸುಬ್ಬಣ್ಣನವರು ಬರುವುದಿಲ್ಲವೆಂದು ಕೇಳಿ ನಮ್ಮ ಮಾವನವರು ಬರದೇ ಇದ್ದರೆ ಬಿಡುತ್ತಾನೆ ಎಂದು ಬಹಳ ಕೋಪ ದಿಂದ ಹೇಳಿ ಸುಮ್ಮನಾದರು.

ಇದಾದ ಕೆಲವು ದಿವಸದ ಮೇಲೆ ನಮ್ಮ ಮಾವನವರ ಬಳಿಗೆ ಗುಮಾಸ್ತರು ಬಂದು "ಈ ದಿನ ಸಾಯಂಕಾಲ ದೇವಸ್ಥಾನದಲ್ಲಿ ಹೆಚ್ಚು ಗಟ್ಲೆ. ಈ ದಿನ ಸುಬ್ಬಣ್ಣನವರು ದೇವಸ್ಥಾನದಲ್ಲಿ ಪಿಟೀಲು ನುಡಿಸುತ್ತಾರೆ. ಹಬ್ಬ ಹುಣ್ಣಿಮೆಗಳಲ್ಲಿ ಬಂದು ನುಡಿಸುವುದು ವಾಡಿಕೆ. ಸ್ವಾಮಿಯವರು ದಯಮಾಡಿಸಿದರೆ ಕೇಳಬಹುದು" ಎಂದು ಹೇಳಿದರು. ಮೊದಲಲ್ಲಿ ನಮ್ಮ ಮಾವನವರು "ಇವನು ನಮ್ಮ ಮನೆಗೆ ಬರುವುದಿಲ್ಲ ಎಂತ ಹೇಳಿರುವಾಗ ನಾನು ಇವನ ಪಿಟೀಲು ಕೇಳುವುದಕ್ಕೆ ದೇವಸ್ಥಾನಕ್ಕೆ ಹೋದರೆ ಮರ್ಯಾದೆಯಿಲ್ಲ" ಎಂದುಕೊಂಡರು; ಆಮೇಲೆ "ದೇವಸ್ಥಾನಕ್ಕೆ ಹೋಗು ವುದಕ್ಕೆ ಇಂಥಾ ಕಾರಣ ಅಡ್ಡಿಯಾಗಬಾರದು. ಹೋಗುವುದೇ ಸರಿ.

ಹಾಗೆಯೇ ಸಂಗೀತವನ್ನು ಕೇಳುವುದಾದರೆ ಕೇಳುವುದು. ನನ್ನದು ಯಾಕೊ ವಿಪರೀತ ಜಂಭಕ್ಕೆ ಬಂತು" ಎಂದುಕೊಂಡು ಆ ದಿನ ಸಾಯಂಕಾಲ ದೇವಸ್ಥಾನಕ್ಕೆ ಹೋದರು.

ಸುಬ್ಬಣ್ಣನವರು ಗುಂಪಿನಲ್ಲಿದ್ದರು; 'ಸಂಗೀತಮವಧಾರಯ' ಎಂದಾಗ ಮುಂದಕ್ಕೆ ಬಂದು ಪಿಟೀಲನ್ನು ನುಡಿಸಿದರು. ಜೊತೆಯಲ್ಲಿ ವೆಂಕಟರಮಣನೂ ಬಾರಿಸುತ್ತಿದ್ದನು.

ಸುಬ್ಬಣ್ಣನವರು ಪಿಟೀಲಿನಲ್ಲಿ ತರುತ್ತಿದ್ದ ಗಾನವನ್ನು ವರ್ಣಿಸಲಾರೆ ನೆಂದು ನಾನು ಮೊದಲೇ ಹೇಳಿದ್ದೇನೆ. ಅವರಿಗೆ ದಿನದಿನಕ್ಕೆ ಕೈನುರಿಯು ತ್ತಿತ್ತು. ಆ ದಿನ ಭೈರವೀ ರಾಗವನ್ನು ಬಾರಿಸಿದ್ದನ್ನು ಕೇಳಿ ದೇವಸ್ಥಾನದಲ್ಲಿ ನೆರೆದಿದ್ದ ಜನ ದೇವರನ್ನೇ ಕಂಡವರಂತೆ ಸಂತೋಷದಲ್ಲಿ ಮುಳುಗಿದರು. ಪೂಜೆಯೆಲ್ಲಾ ಮುಗಿದಮೇಲೆ ಎಲ್ಲರೂ ಹೊರಡಬೇಕು, ಆಗ ನಮ್ಮ ಮಾವ ಒಂದು ಕೆಲಸ ಮಾಡಿದರು; ಮೆಲ್ಲನೆ ಗಂಭೀರವಾಗಿ ಸುಬ್ಬಣ್ಣ ನಿಂತಿದ್ದ ಕಡೆ ಬಂದು, ನಿಮ್ಮಂಥ ಸಂಗೀತಗಾರರನ್ನು ನಮ್ಮ ಹತ್ತಿರ ಬನ್ನಿ ಎಂತ ನಾವು ಕರೆದದ್ದು ತಪ್ಪು ಅಲ್ಲವೇ ಸ್ವಾಮಿ? ನೀವು ಸಂಗೀತವನ್ನು ಯೋಗ ದಂತೆ ಸಾಧಿಸಿಬಿಟ್ಟಿದ್ದೀರಿ, ಎಂದರು.

ಸುಬ್ಬಣ್ಣ "ನನಗೆ ಇಷ್ಟು ಮಾತು ಹೇಳಿಬಿಟ್ಟರೆ ನನ್ನ ಬುದ್ಧಿ ಕೆಟ್ಟು ಹೋಗುತ್ತೆ. ನಾನು ಅಲ್ಪ, ದೊಡ್ಡವರ ಹತ್ತಿರ ಬರುವಷ್ಟರವನಲ್ಲ," ಎಂದರು.

ನಮ್ಮ ಮಾವನವರು "ನೀವು ಬಂದರೆ ನಮಗೆ ಬಹಳ ಸಂತೋಷ. ನಮ್ಮ ಮನೆಯಲ್ಲಿ ಒಂದು ಮಗುವಿದೆ. ಅದಕ್ಕೆ ಹಾಡು ಹೇಳಿಕೊಡುವು ದಾದರೆ ಇನ್ನೂ ಸಂತೋಷ. ಹೇಗಾದರೂ ನಮ್ಮನ್ನು ದೂರ ಎಂತ ಎಣಿಸಬೇಡಿ ಸುಬ್ಬಣ್ಣನವರೇ" ಎಂದು ಹೇಳಿ ಹೊರಟುಹೋದರು.

ನಮ್ಮ ಮಾವನವರು ಜನರಲ್ಲಿ ಇಷ್ಟು ಸುಲಭವಾಗಿ ಇಷ್ಟು ಮಾತ ನಾಡುವವರಲ್ಲ. ಆದರೆ ಎಷ್ಟಾದರೂ ದೊಡ್ಡತರದ ಮನುಷ್ಯರು. ದೊಡ್ಡವರನ್ನು ಕಂಡಾಗ ಗುರುತಿಸುವರು, ಮರ್ಯಾದೆ ಮಾಡುವರು. ಅಲ್ಲದೆ ಅವರು ಸುಬ್ಬಣ್ಣನವರ ಗಾನಕ್ಕೆ ಸೋತುಹೋದರು. ಎಂತಹ ಕಠಿಣರನ್ನೂ ಗಾನವು ನಯವಾಗಿ ಮಾಡಬಲ್ಲುದು. ವಿದ್ಯೆಯಿಂದ

ಸಂಸ್ಕೃತರೂ ಆದವರನ್ನು ಅದು ನಯದ ದಾರಿಗೆ ಕರೆಯುವುದು ಏನು ಆಶ್ಚರ್ಯ? ನೋಡಿದರೆ ಅವರಲ್ಲಿರುವ ನಯವನ್ನೇ ಅದು ಹೊರಗೆ ಬರುವಂತೆ ಮಾಡುತ್ತದೆಂದು ಹೇಳಬಹುದು.

ಇವರ ನಡತೆಯಿಂದ ಸುಬ್ಬಣ್ಣನವರ ನಯವೂ ಹೊರಕ್ಕೆ ಬಂದಿತು. ಮಾರನೆಯ ದಿನ ಅವರು ನಮ್ಮ ಮನೆಗೆ ಬಂದು ಲಲಿತೆಗೆ ಪಾಠ ಹೇಳುವುದಕ್ಕೆ ಆರಂಭಿಸಿದರು. ಆಮೇಲೆ ಎಂದೋ ಈ ಮಾತು ಆಡುವಾಗ ಅವರು ಹೀಗೆಂದು ಹೇಳಿದರು. "ಸುಬೇದಾರರು ಸುಬೇದಾರರು ಎಂದರೆ ಹ್ಯಾಗಿದಾರೋ ಎಂಥಾ ಮನುಷ್ಯರೋ ಎಂತ ಇದ್ದೆ, ನೋಡಿ. ಅದರಿಂದಲೇ ಕರೆದರೆ ಬರೋದಿಲ್ಲ ಎಂತ ನಾನು ಇದ್ದದ್ದು. ದೇವಸ್ಥಾನದಲ್ಲಿ ಅವರು ಬಂದು ಮಾತನಾಡಿಸಿದಾಗ ಅವರು ಎಂಥವರು ಎಂತ ತಿಳಿಯಿತು. ಚಿನ್ನ, ಸ್ವಾಮಿ, ಅಪರಂಜಿಯ ಚಿನ್ನ; ಸ್ವಲ್ಪ ಜಂಭ ಎನ್ನಬಹುದು ಜನ. ಆದರೆ ಸುಬೇದಾರರಿಗೆ ಜಂಭ ಇಲ್ಲದೇ ಇದ್ದರೆ ಕೆಲಸ ಹೇಗೆ ನಡೆಯಬೇಕು?" ಎಂದರು. ಕೊಂಚ ದಿನ ಪಾಠ ಹೇಳುವುದರಲ್ಲಿ ಇವರಿಗೆ ನಮ್ಮ ಮಾವನವರ ಮನೆಯಲ್ಲಿ ಬರುವುದು ಹೋಗುವುದು ಬಳಕೆಯಾಯಿತು.

ನಮ್ಮ ಅಕ್ಕನಿಗೆ ಸುಬ್ಬಣ್ಣನವರಲ್ಲಿ ಬಹಳ ಕನಿಕರ. ಆಕೆಗೆ ಯಾರನ್ನು ಕಂಡರೂ ಕನಿಕರವೇ. ಅವರು ಜನರ ಕಷ್ಟವನ್ನು ನೋಡಲಾರರು. ಗಂಡನಲ್ಲಿ ಅತಿಶಯವಾದ ಪ್ರೇಮ, ಭಕ್ತಿ. ಮಕ್ಕಳೆಂದರೆ ಹೇಳಲಾರದ ಅಕ್ಕರೆ. ಬಂದವರು ಹೋದವರಲ್ಲಿ ಎಷ್ಟೋ ವಿಶ್ವಾಸ. ಇವರು ಗಂಡನನ್ನೂ ಮಕ್ಕಳನ್ನೂ ನೋಡಿಕೊಳ್ಳುವ ರೀತಿಯನ್ನೂ ಮನೆಯ ಆಳುಗಳನ್ನು ಕಾಣುವ ರೀತಿಯನ್ನೂ ಎಲ್ಲ ಕೆಲಸದ ಮೇಲ್ವಿಚಾರಣೆ ಮಾಡುವ ರೀತಿಯನ್ನೂ ನೋಡಿ ಸುಬ್ಬಣ್ಣನವರಿಗೆ ಅವರಲ್ಲಿ ಬಹಳ ಮರ್ಯಾದೆ ಹುಟ್ಟಿತು. ಅವರು ಬಹಳ ದಿನದ ಮೇಲೆ ನನಗೆ ಹೇಳಬೇಕಾದರೆ "ಎಂಥ ಹೆಂಗಸು ಸ್ವಾಮಿ ಆಕೆ. ನಾನು ಒಬ್ಬರನ್ನು ಅಂಥವರನ್ನು ನೋಡಿದ್ದೆ. ಈಗ ಇನ್ನೊಬ್ಬರನ್ನು ನೋಡಿದಹಾಗಾಯಿತು" ಎಂದರು. "ಒಬ್ಬರು ಯಾರು?" "ನನ್ನ ಸಂಸಾರ ಮಾಡಿದರು ಬಿಡಿ; ಎಂದೋ ಒಂದು ಕಾಲದಲ್ಲಿ." ಹೀಗೆ ಹೇಳುವಾಗ ಸುಬ್ಬಣ್ಣನವರು ಮುಖವನ್ನು

ಬೇರೆ ಕಡೆಗೆ ತಿರುಗಿಸಿಕೊಂಡರು. ಇಷ್ಟು ಒಳ್ಳೆಯವರ ಮನೆಗೆ ಹೋಗಿ ಬರುವುದರಲ್ಲಿ ಇವರಿಗೆ ಸ್ವಲ್ಪ ಸಂತೋಷ. ಅಲ್ಲದೆ ಲಲಿತೆ ಸುಟಿಯಾಗಿ ಹಾಡನ್ನು ಕಲಿತುಕೊಳ್ಳುತ್ತಿದ್ದಳು: ಅವಳಿಗೆ ಹೇಳಿಕೊಡುವುದರಲ್ಲಿ ಒಂದು ಹೆಚ್ಚಾದ ಸಂತೋಷ. ಹೀಗೆ ಸಂಸಾರದ ಸುಖ ಒಂದೊಂದೂ ಸುಬ್ಬಣ್ಣನವರನ್ನು ರಾಟೆಯ ಓಟದಲ್ಲಿ ಸೇರಿಸಿಕೊಂಡಿತು. ಅವರು ಇದಕ್ಕೆ ಸಿಕ್ಕಬಾರದು ಸಿಕ್ಕಬಾರದು ಎಂದುಕೊಳ್ಳುತ್ತಾ ಸೇರಿಯೂ ಸೇರದ ಹಾಗೆ ಇರಬೇಕು ಎಂದು ಪ್ರಯತ್ನಪಡುತ್ತಾ ಕಾಲವನ್ನು ಕಳೆಯುತ್ತಿದ್ದರು.

ಏನೇ ಆದರೂ ಸುಬ್ಬಣ್ಣನವರು ನಮ್ಮ ಮಾವನವರ ಮನೆಯಲ್ಲಿ ಊಟ ಮಾಡುತ್ತಿರಲಿಲ್ಲ. ಊಟಕ್ಕೆ ಏಳಿ ಎಂದರೆ ಕಣ್ಣಿಗೆ ಕಾಣದೆ ಓಡುವರು. ಎರಡು ತಿಂಗಳಾಯಿತು. ನಮ್ಮ ಮಾವನವರು ಅವರಿಗೆ ಹತ್ತು ರೂಪಾಯಿ ಕೊಡುವುದಕ್ಕೆ ಹೋದರು. ಸುಬ್ಬಣ್ಣ ತೆಗೆದುಕೊಳ್ಳುವುದಿಲ್ಲವೆಂದರು. ನಮ್ಮ ಮಾವನವರು "ನೀವು ಸಂಬಳ ತೆಗೆದುಕೊಳ್ಳದೇ ಇದ್ದರೆ ನಿಮ್ಮ ಕೈಲಿ ಪಾಠವನ್ನು ಹೇಗೆ ಹೇಳಿಸುವುದು? ಅದೆಲ್ಲಾ ಆಗುವುದಿಲ್ಲ" ಎಂದರು. ಸುಬ್ಬಣ್ಣನವರು "ನನಗೆ ಬೇಕಾದರೆ ತಾವು ಹಣ ಕೊಡಬೇಕು, ಬೇಡದೇ ಇದ್ದರೆ ಕೊಡಬೇಕಾದದ್ದೇನು? ನನಗೆ ಹಣ ಬೇಡ," ಎಂದರು. ನಮ್ಮ ಮಾವನವರು "ಹಣ ಉಳಿಸಿಕೊಳ್ಳುವುದಕ್ಕೆ ದಿಕ್ಕಿಲ್ಲದ ಮುದುಕನನ್ನು ಕರೆದು ಪಾಠ ಹೇಳೋಕೆ ಇಟ್ಟುಕೊಂಡರು ಎಂತ ಜನರು ಎಂದಾರು, ಆಗುವುದಿಲ್ಲ" ಎಂದರು. ಸುಬ್ಬಣ್ಣ ಹೊರಟುಹೋದರು. ಮಾರನೆಯ ದಿನ ಪಾಠಕ್ಕೆ ಬರಲೇ ಇಲ್ಲ. ನಮ್ಮ ಮಾವನವರು ಏಕೆ ಎಂದು ವಿಚಾರಿಸಿದರು. ಲಲಿತಾ ಆ ಮೊದಲೇ ಸುಬ್ಬಣ್ಣನವರನ್ನು ಕೇಳಿದ್ದಳು. ಅವರು, ನಿಮ್ಮ ತಂದೆಯವರು ಬರಬೇಡ ಎಂದು ಹೇಳಿದಾರೆ, ಎಂತ ಹೇಳಿದರಂತೆ. ಅದನ್ನು ಅವಳು ತಂದೆಗೆ ತಿಳಿಸಿದಳು. ಪಾಠ ಹೇಳುವುದಾದರೆ ಸಂಬಳ ತೆಗೆದುಕೊಳ್ಳಬೇಕು, ಇಲ್ಲದೆ ಇದ್ದರೆ ಬಿಡಲಿ, ಎಂದು ನಮ್ಮ ಮಾವನವರು ಖಂಡಿತವಾಗಿ ಹೇಳಿಬಿಟ್ಟರು. ಮೂರು ನಾಲ್ಕು ದಿನದ ಮೇಲೆ ಸುಬ್ಬಣ್ಣನವರು ಮತ್ತೆ ಬಂದು ಪಾಠ ಹೇಳುವುದಕ್ಕೆ ಆರಂಭಮಾಡಿದರು. ನಮ್ಮ ಮಾವನವರು ಹಣ ಕೊಡುವುದಕ್ಕೆ ಬರಲು ಅದನ್ನು

ತೆಗೆದುಕೊಂಡರು. ನಮ್ಮ ಮಾವನವರು "ಅದೀಗ ಸರಿ, ನಮಗೂ ಸಂತೋಷ, ನಿಮಗೂ ಸಂತೋಷ ಇದು" ಎಂದು ಹೇಳಿದರು. ಸುಬ್ಬಣ್ಣ "ನನಗೆ ಸಂತೋಷ ಇಲ್ಲ ಸ್ವಾಮಿ. ಆದರೇನು ಮಾಡುವುದು. ನೀವು ಎಷ್ಟಾದರೂ ಮ್ಯಾಸ್ಟ್ರೇಟರು. ನಿಮ್ಮನ್ನು ಕಂಡರೆ ನಮಗೆ ಭಯ ಸ್ವಾಮಿ" ಎಂದರು. ನಮ್ಮ ಮಾವನವರು ನಕ್ಕರು. ನಮ್ಮ ಅತ್ತೆ ಅಲ್ಲಿಗೆ ಬಂದಾಗ ಸುಬ್ಬಣ್ಣನವರು "ಅಲ್ಲವೇನಮ್ಮ, ನಿಮ್ಮ ಯಜಮಾನರು ಮ್ಯಾಸ್ಟ್ರೇಟರು. ನಮ್ಮಂತವರು ಹೆದರಬೇಕೋ ಇಲ್ಲವೋ?" ಎಂದರು. ಆಕೆ "ಇದಕ್ಕೆಲ್ಲಾ ಹೆದರುತ್ತಾರೆಯೇ ಸುಬ್ಬಣ್ಣನವರೇ, ನ್ಯಾಯ ಹೇಳಿದರೆ ಮ್ಯಾಜಿಸ್ಟ್ರೇಟರು. ಅನ್ಯಾಯ ಮಾಡಿದರೆ ಅಪೀಲು ಇಲ್ಲವೇ?" ಎಂದರು. ಸುಬ್ಬಣ್ಣನವರು ಸುಮ್ಮನೆ ತಮಗೆ ತಾವೇ ನಕ್ಕರು. ಒಂದು ಗಳಿಗೆ ಬಿಟ್ಟು ನಮ್ಮ ಮಾವನವರನ್ನು "ಏನು ಸ್ವಾಮಿ, ಅಪೀಲು ಇದೆ ಅಲ್ಲವೇ ಸ್ವಾಮಿ. ಮಾಡಬಹುದಲ್ಲವೇ ಸ್ವಾಮಿ" ಎಂದರು. ನಮ್ಮ ಮಾವನವರು "ಮಿಕ್ಕಾದ್ದಕ್ಕೆ ಅಪೀಲು ಇರಬಹುದು. ಇದಕ್ಕೆ ಅಪೀಲು ಇಲ್ಲ" ಎಂದರು. ಸುಬ್ಬಣ್ಣ "ಏನೋ ಕಂಡವರ್‍ಯಾರು" ಎಂದರು; ತಮಗೆ ತಾವೇ ನಕ್ಕರು.

ಆಗಿದ್ದದ್ದು ಏನು ಎಂದರೆ ನಮ್ಮ ಅತ್ತೆ ಹಿಂದಿನ ದಿನ ಅವರ ಹತ್ತಿರ ಹೋಗಿ "ನಿಮ್ಮದೂ ಹಠ, ಅವರದೂ ಹಠ. ನಿಮ್ಮ ಹಠದಲ್ಲಿ ಮಗುವಿಗೆ ಪಾಠವೇ ಇಲ್ಲ. ಅವರು ಚಿಕ್ಕವರು. ಅವರ ಹಠವೇ ನಡೆಯಲಿ ಬನ್ನಿ" ಎಂದರು. ಸುಬ್ಬಣ್ಣ "ಬರುತ್ತೇನೆ, ಅದಕ್ಕೆ ಅಡ್ಡಿಯಿಲ್ಲ. ನಾನು ರೂಪಾಯಿ ತೆಗೆದುಕೊಂಡು ಏನು ಮಾಡಲಿ?" ಎಂದರು. ಎಷ್ಟು ಹೇಳಿದರೂ ಒಪ್ಪಲಿಲ್ಲ. "ಹುಡುಗೀಗೆ ಪಾಠ ಹೇಳಬೇಕು ಎಂತ ನಿಮಗೆ ಇಷ್ಟವಿಲ್ಲವೇ" ಎಂದು ಇವರು ಕೇಳಿದರು. "ನಮ್ಮಪ್ಪನಾಣೆ ಈ ಮೂರು ದಿನ ಬರದೇ ಇದ್ದದ್ದೇ ನನಗೆ ಕಷ್ಟವಾಗಿದೆ. ಆದರೆ ನಾನೇನು ಮಾಡಲಿ. ನನಗೆ ಹಣ ಬೇಕಿಲ್ಲ. ತಕ್ಕೊಂಡರೆ ನನ್ನ ಬುದ್ಧಿ ಕೆಡುತ್ತೆ" ಎಂದು ಸುಬ್ಬಣ್ಣನವರು ಹೇಳಿದರು. ನಮ್ಮತ್ತೆ "ಅದಕ್ಕೊಂದು ಉಪಾಯ ಮಾಡಿ. ನೀವು ರೂಪಾಯಿ ತೆಗೆದುಕೊಂಡು ಅದನ್ನು ಯಾರಿಗಾದರೂ ಕೊಟ್ಟುಬಿಡಿ" ಎಂದರು. ಸುಬ್ಬಣ್ಣನವರು "ಮಹಾತಾಯಿ, ಒಂದು

ಕೆಲಸ ಮಾಡಿ. ಅವರು ಕೊಡುವ ಹಣ ನಿಮ್ಮ ಕೈಗೆ ಕೊಟ್ಟುಬಿಡುತ್ತೇನೆ. ಅದನ್ನು ನೀವು ಏನಾದರೂ ಮಾಡಿಬಿಡಿ. ನಾನು ಬಂದು ಪಾಠ ಹೇಳುತ್ತೇನೆ'' ಎಂದರು. ಆಕೆ ಒಪ್ಪಿದರು. ಅದರಿಂದಲೇ ಸುಬ್ಬಣ್ಣನವರು ಮತ್ತೆ ಪಾಠ ಹೇಳುವುದಕ್ಕೆ ಬಂದದ್ದು. ಈ ಏರ್ಪಾಡು ನಮ್ಮ ಮಾವನವರಿಗೆ ತಿಳಿಯದು. ಸುಬ್ಬಣ್ಣನವರು ಆಮೇಲೆ ಈ ಮಾತನ್ನು ನನಗೆ ಹೇಳುವಾಗ, ''ನೋಡಿದಿರೋ ಅಪೀಲು. ಸುಬೇದಾರ್ರಿಂದ ಸುಬೇದಾರರ ಹೆಂಡತಿಗೆ'' ಎಂದರು. ನಾನು ನಕ್ಕೆ. ಸುಬ್ಬಣ್ಣನವರು ''ಅಲ್ಲೂ ಅಷ್ಟೇ ಸ್ವಾಮಿ. ಅವ ಅನ್ಯಾಯ ಮಾಡಿದರೆ ಅಪೀಲು ಮಾಡುವುದೇ'' ಎಂದರು. ನಾನು ಎಲ್ಲಿ ಎಂದೆ. ಸುಬ್ಬಣ್ಣ ''ಪರಲೋಕದಲ್ಲಿ ಪರಶಿವ ಹೀಗೇನಾದರೂ ಹಠ ಮಾಡುತ್ತಾನೆ; ಮಾಡದೇ ಬಿಡೋದಿಲ್ಲ. ಆಗ್ಗೆ ಅಮ್ಮನವರಿಗೆ ಅಪೀಲು ಮಾಡುವುದೇ; ಬಿಡೋದಿಲ್ಲ'' ಎಂದರು. ನಾನು ಅವರ ಮುಖವನ್ನು ನೋಡಿದೆ. ಅವರು ಅದನ್ನು ನಿಜವಾಗಿಯೇ ನಂಬಿದ್ದರೆಂದು ತೋರಿತು. ಹೀಗೆ ಇಲ್ಲಿಯ ನಡವಳಿಕೆಗಳಿಂದ ಅಲ್ಲಿಯ ನಡವಳಿಕೆಗಳನ್ನು ಕಟ್ಟುವುದು ಇವರಲ್ಲಿ ಒಂದು ವಾಡಿಕೆಯಾಗಿಹೋಗಿತ್ತು.

## ೧೧

ಹೀಗೆಯೇ ನಾಲ್ಕು ವರುಷಗಳು ಕಳೆದುವು. ಈ ಮಧ್ಯೆ ಆದ ವಿಷಯಗಳು ಹೇಳತಕ್ಕಂಥವು ಏನೂ ಇಲ್ಲ. ಈ ಕಾಲದಲ್ಲೇ ನಾನು ಬಂದು ಸುಬ್ಬಣ್ಣನವರ ಸಂಗಡ ಪರಿಚಯ ಮಾಡಿಕೊಂಡದ್ದು. ಲಲಿತಾನ ನನಗೆ ಕೊಡಬೇಕೆಂದು ಗೊತ್ತಾಗಿದ್ದದರಿಂದ ಸುಬ್ಬಣ್ಣನವರಿಗೆ ನನ್ನ ಮೇಲೆ ಬಹಳ ವಿಶ್ವಾಸ. ನಾವು ಆಗಾಗ ಏನನ್ನಾದರೂ ಮಾತನಾಡುವೆವು. ನನಗೂ ಪಿಟೀಲಿನ ಮೇಲೆ ಆಸೆ. ಸುಬ್ಬಣ್ಣನವರು ನನಗೂ ಪಿಟೀಲು ಹೇಳಿಕೊಟ್ಟರು. ಬರಬರುತ್ತ ನನಗೆ ಸುಬ್ಬಣ್ಣನವರ ಸ್ವಭಾವ ಚೆನ್ನಾಗಿ ತಿಳಿದು ''ಈತನು ಧನ್ಯನು, ಈತನು ಯೋಗಿಗಳಲ್ಲಿ ಅಗ್ರಗಣ್ಯನು, ಈತನು ದೇವರನ್ನು ಸಾಕ್ಷಾತ್ ಕಂಡವನು'' ಎಂದು ನಾನು ತಿಳಿದುಕೊಂಡೆನು. ಏನೇ ಆಗಲಿ ಸುಬ್ಬಣ್ಣನವರು ಮನೆಯೊಳಗೆ ಮಲಗುತ್ತಿರಲಿಲ್ಲವಷ್ಟೆ. ಒಂದು ಸಲ ನಮ್ಮ ಮಾವ ''ಸುಬ್ಬಣ್ಣನವರೇ, ಎಲ್ಲೋ ಅಲೆಯುತ್ತಾ

ಏಕೆ ಇರಬೇಕು. ನಮ್ಮ ಮನೆಯವರ ಹಾಗೆ ಇದ್ದುಬಿಡಿ. ಇಲ್ಲೇನು ಜಾಗಕ್ಕೆ ಕಮ್ಮಿಯಿಲ್ಲ. ಮನೆಯವರೆಲ್ಲಾ ಪಳಗಿದಾರೆ ಬನ್ನಿ'' ಎಂದರು. ಸುಬ್ಬಣ್ಣನವರು ಆಮೇಲೆ ನಾಲ್ಕು ದಿನ ಮನೆಗೇ ಬರಲಿಲ್ಲ. ಕೊನೆಗೆ ನಮ್ಮ ಮಾವ ''ಇರಲಿಕ್ಕೆ ಇಷ್ಟವಿಲ್ಲದಿದ್ದರೆ ಬೇಡ, ಬಿಡಿ'' ಎಂದು ಹೇಳಿ ಕಳುಹಿಸುವವರೆಗೆ ಅವರಿಗೆ ಆ ಕಡೆ ಬರುವುದಕ್ಕೆ ಹೆದರಿಕೆ. ಏಕೆ ಎಂದರೆ ''ಯಜಮಾನರದು ಹಠ. ಅಮ್ಮನವರೂ ಆ ಕಡೆ ಮಾತಾಡಿದರೆ ನನ್ನ ಕೆಲಸ ಮುಗಿಯಿತು'' ಎಂದರು. ಇನ್ನೊಂದು ಸಲ ಲಲಿತೆಯ ಹುಟ್ಟಿದ ಹಬ್ಬದಲ್ಲಿ ಇವರಿಗೆ ಹೆಚ್ಚಿನ ಮರ್ಯಾದೆ ಮಾಡುತ್ತಾರೆ ಎಂತ ತಿಳಿದು ಇವರು ನಾಲ್ಕು ದಿನ ಕಣ್ಮರೆಯಾದರು. ಹುಟ್ಟಿದ ಹಬ್ಬದ ದಿನವೇ ಆಸಾಮಿ ಇಲ್ಲ. ಮೂರು ದಿನದ ಮೇಲೆ ಬಂದರು. ನಮ್ಮ ಮಾವನವರು ಉರಿದುಬಿದ್ದರು. ಸುಬ್ಬಣ್ಣನವರು ಲಕ್ಷ್ಯಮಾಡಲಿಲ್ಲ. ಲಲಿತೆಯ ಮದುವೆಯಲ್ಲೂ ಹಾಗೆಯೇ. ನಮ್ಮ ಮಾವನವರು ಯಾವಾಗ ಅವರಿಗೆ ಮರ್ಯಾದೆ ಮಾಡಬೇಕು ಎನ್ನುವರೋ ಆಗ ಅವರು ತಪ್ಪಿಸಿಕೊಳ್ಳುವರು. ಹೀಗೆ ಏನೂ ಬೇಡದೆ ಇದ್ದ ಮನುಷ್ಯನನ್ನು ನಾನು ಇನ್ನು ಯಾರನ್ನೂ ನೋಡಿಲ್ಲ. ಮನೆಯ ಜನರಲ್ಲಿ ಬಹಳ ಪ್ರೀತಿಯಿದ್ದರೂ ಅದರಿಂದ ಕಟ್ಟಿಗೆ ಸಿಕ್ಕದಂತೆ ಇರುವುದಕ್ಕೆ ಇವರು ದಿನಾ ಪ್ರಯತ್ನ ಮಾಡುತ್ತಿರುವರು. ಕಡೆಗೂ ಇವರು ಹೀಗೆಯೇ ಇದ್ದರು.

ಕೊನೆಗೆ ನಮ್ಮ ಮಾವನವರಿಗೆ ಬೆಂಗಳೂರಿಗೆ ವರ್ಗವಾಯಿತು. ಇದು ತಿಳಿದ ದಿನ ಸುಬ್ಬಣ್ಣನವರ ಮುಖ ಕಂದಿದಹಾಗಿತ್ತು. ನಾನು ಆಗ ಅಲ್ಲೇ ಇದ್ದೆ. ಏನು ಸುಬ್ಬಣ್ಣನವರೇ, ಎಂತ ಕೇಳಿದೆ. ಅವರು ''ನೋಡೀಪ್ಪಾ, ಇದಕ್ಕೇ ನಾನು ಇವರನ್ನು ಬೇಡಿದೆ. ಸ್ವಾಮಿ, ಬೇಡ. ನನ್ನ ಮಾಫ್ ಮಾಡಿ. ಈ ಕಷ್ಟಕ್ಕೆ ಸಿಕ್ಕಿಸಬೇಡಿ ಎಂದೆ. ಒಪ್ಪಲಿಲ್ಲ'' ''ಏನು ಕಷ್ಟ?'' ''ನಾನು ನಿಮ್ಮನ್ನು ನೋಡದೇ ಇದ್ದರೆ ಈಗ ಹೊರಟುಹೋಗುತ್ತೀರಿ ಎನ್ನುವ ದುಃಖ ಇತ್ತೆ? ಈಗ ನೋಡಿ. ನನ್ನ ಪ್ರಾಣ ತಲ್ಲಣಿಸುತ್ತದೆ. ಇನ್ನು ಈ ರಾತ್ರಿಯೆಲ್ಲಾ ಇದಕ್ಕೆ ಉಪಶಮನ ಮಾಡಿಕೊಳ್ಳಬೇಕು'' ಅವರ ಉಪಶಮನ ಎನ್ನುವುದು ದೇವಸ್ಥಾನದಲ್ಲಿ ಕುಳಿತು ದೇವರ ಧ್ಯಾನ ಮಾಡುತ್ತ ಇಲ್ಲಿಯ ಯೋಚನೆಗಳನ್ನು ಮರೆಯುವುದಕ್ಕೆ ಶಕ್ತಿ ಕೊಡೆಂದು

ಪ್ರಾರ್ಥಿಸುವುದು. ನಾನು ಆ ದಿನ ಸಾಯಂಕಾಲ ಅವರ ಜೊತೆಯಲ್ಲಿ ಕುಳಿತೆನು. ಮೆಲ್ಲಮೆಲ್ಲಗೆ ಈ ಮಾತು ಆ ಮಾತು ಎತ್ತಿ ಅವರ ಚರಿತ್ರೆಯನ್ನು ಹೇಳುವ ಹಾಗೆ ಮಾಡಿದೆನು. ಅಲ್ಲಲ್ಲಿ ಒಂದೆರಡು ಕನಿಕರದ ಮಾತನ್ನಾಡಿದೆನು. ಅಲ್ಲಲ್ಲಿ ಒಂದೆರಡು ತತ್ತ್ವದ ಮಾತನ್ನೂ ಹೇಳಿದೆನು. ಎಲ್ಲೋ ಸೂಕ್ಷ್ಮವಾಗಿ ಸ್ವಲ್ಪ ಸ್ವಲ್ಪವಾಗಿ ಅವರು ಮೊದಲಿಂದ ಕೊನೆಯವರೆಗೆ ಎಲ್ಲವನ್ನೂ ಹೇಳಿದರು ; "ತುಂಬಿ ಹರಿಯುವ ನದೀಲಿ ನೀರು ಕೆಂಪು ; ನೀರು ತಿಳಿಯಾಗಬೇಕಾದರೆ ಹೊಳೆ ಸಣ್ಣದಾಗಬೇಕು" ಎಂದರು. ನಾನು ಅವರಿಗೆ ಹೇಳಿದೆ "ಸ್ವಾಮಿ, ಬಿಟ್ಟು ಪಡುವ ಸುಖ ಸುಖವಲ್ಲ. ಕಟ್ಟಿಕೊಂಡು ಆಮೇಲೆ ಬಿಡಬಹುದು. ಅದರ ಸುಖ ಸುಖ. ಸಂಸಾರ ಮಾಡದೆಯೇ ಇದ್ದಿದ್ದರೆ ನಿಮಗೆ ಇಷ್ಟು ಸಂಸ್ಕಾರ ಹೇಗಾಗುತ್ತಿತ್ತು?" ಎಂದೆ. ಅವರು, ಇಲ್ಲಿಗೆ ಬಂದು ಈ ಸಂಸ್ಕಾರ ಪಕ್ವ ಆಗಬೇಕು, ಎಂದರು. ನಾನು ಏನೂ ಹೇಳಲಾರದೆ ಹೋದೆ. ಬಹಳ ಹೊತ್ತು ಈ ಮಾತು ಆ ಮಾತು ಆಡುತ್ತಿದ್ದೆವು. ಆಮೇಲೆ ನಾನು ಹೊರಟುಬಂದೆ.

ಆ ಮೊದಲು ನಾವು ಹೊರಡುವವರೆಗೂ ಸುಬ್ಬಣ್ಣನವರು ಕಣ್ಣಿಗೆ ಕಾಣಲಿಲ್ಲ. ನಮ್ಮ ಅತ್ತೆಗೆ ದೊಡ್ಡ ಯೋಚನೆ ಹತ್ತಿತು. ಸುಬ್ಬಣ್ಣನವರು ತಮಗೆ ಬೊಂಬಾಯಲ್ಲಿ ಸಾಹುಕಾರನು ಕೊಟ್ಟ ನೂರು ರೂಪಾಯಿ ನೋಟನ್ನು ಮಾವನವರ ಕೈಯಲ್ಲಿ ಕೊಟ್ಟು ಬ್ಯಾಂಕಿನಲ್ಲಿ ಹಾಕಿಸಿದ್ದರು. ತನ್ನ ಕಡೆಯ ದಿನಕ್ಕೆ ಇದು ಉಪಯೋಗಕ್ಕೆ ಬರಬೇಕು ಎಂಬುದು ಅವರ ಅಭಿಪ್ರಾಯ. ನಮ್ಮ ಮಾವ ಕೊಟ್ಟ ಸಂಬಳವನ್ನು ನಮ್ಮತ್ತೆಯ ಕೈಯಲ್ಲೇ ಕೊಡುತ್ತಾ ಇದ್ದರಷ್ಟೆ. ನಮ್ಮತ್ತೆ ಅದನ್ನು ಖರ್ಚು ಮಾಡಲಿಲ್ಲ. ಇವರಿಗೆ ಉಪಯೋಗವಾದೀತು, ಇರಲಿ, ಹೇಗಿದ್ದರೂ ಊರಿಗೆ ಹೋಗುವ ಮುಂಚೆ ಇರುತ್ತಾರಲ್ಲಾ, ಅವರ ಕೈಯಲ್ಲೇ ಎಲ್ಲವನ್ನೂ ಕೊಡೋಣ ಎಂತ ಇದ್ದರು. ಈಗ ನೋಡಿದರೆ ಸುಬ್ಬಣ್ಣನವರೇ ಮಾಯವಾದರು. ಈ ಪೇಚಾಟವನ್ನು ನನಗೆ ಹೇಳಿದರು. ನಾನು ಮಾವನಿಗೆ ಹೇಳಬೇಕಾಯಿತು. ನಮ್ಮ ಮಾವನವರು ಮೊದಲು ಸ್ವಲ್ಪ ಕೋಪ ಮಾಡಿದರು. ಆಮೇಲೆ ಹೆಂಡತಿಯನ್ನು ಕುರಿತು "ನ್ಯಾಯ. ನನ್ನದೂ ಹಠ. ಅವರದೂ ಹಠ. ನೀನೇನು ಮಾಡೀಯೆ?" ಎಂದು ಹೇಳಿ ಹಣವನ್ನು ಸುಬ್ಬಣ್ಣನವರ ಲೆಕ್ಕಕ್ಕೆ ಬ್ಯಾಂಕಿ

ನಲ್ಲಿ ಹಾಕಿಸಿ, ವೆಂಕಟರಮಣನನ್ನು ಕರೆದು "ಸುಬ್ಬಣ್ಣನವರಿಗೆ ಇದನ್ನು ತಿಳಿಸು" ಎಂದು ಹೇಳಿದರು. ಸುಬ್ಬಣ್ಣನವರನ್ನು ಚೆನ್ನಾಗಿ ನೋಡಿಕೊಳ್ಳಿ ಎಂದು ಹತ್ತು ಜನಕ್ಕೆ ಹೇಳಿ ನಾವೆಲ್ಲಾ ಊರು ಬಿಟ್ಟು ಬೆಂಗಳೂರಿಗೆ ಪ್ರಯಾಣ ಮಾಡಿದೆವು.

ಮೂರು ಮೈಲು ಬಂದ ಮೇಲೆ ಯಾರೋ ಹಿಂದಿನಿಂದ ಓಡಿಬರುತ್ತಿದ್ದರು. ಪ್ರಾಣಭಯದಿಂದ ಓಡುವವರು ಹಾಗೆ ಓಡಲಾರರು. ನಾವು ನೋಡಿ ಗಾಡಿ ನಿಲ್ಲಿಸಿದೆವು. ಬಂದವರು ಸುಬ್ಬಣ್ಣ. ಬಂದು "ಅಯ್ಯೋ ಈ ಸಂಸಾರದ ಬಂಧನ ನನಗೆ ಬೇಡವೆಂದು ಹೊರಟುಹೋಗಿದ್ದೆ. ನನ್ನಿಂದಾಗಲಿಲ್ಲ. ಬಂದೇಬಿಟ್ಟೆ. ಲಲಿತಮ್ಮನನ್ನು ನೋಡದ ಹಾಗೆ ಇರೋಕಾಗಲಿಲ್ಲ. ಬಂದೇಬಿಟ್ಟೆ" ಎಂದರು. ನಮ್ಮ ಮಾವ "ಅಯ್ಯೋ ಹುಚ್ಚು ಬ್ರಾಹ್ಮಣ, ಇದಕ್ಕೇ ಇಷ್ಟು ಕಷ್ಟ? ಹೊರಟುಹೋಗೋಣೇಕೆ. ಓಡಿಬರೋಣೇಕೆ. ಎಲ್ಲರಂತೆ ಇದ್ದರೆ ಆಗದೆ" ಎಂದು ಹೇಳಿದರು. ಅವರು ತಿಳಿಯದೆ ಹೇಳಿದ ಮಾತಲ್ಲ; ಸುಬ್ಬಣ್ಣನವರು ಎಲ್ಲರಂತೆ ಇರಬಲ್ಲವರಲ್ಲವೆಂಬ ವಿಷಯವು ಅವರಿಗೆ ಗೊತ್ತು; ಆದರೂ ಆ ಸಮಯದಲ್ಲಿ ಹಾಗೆ ಹೇಳಿದರು. ಸುಬ್ಬಣ್ಣನವರು ಲಲಿತಮ್ಮನನ್ನು ಹತ್ತಿರ ಕರೆದು ಆಶೀರ್ವಾದ ಮಾಡಿ ಆಮೇಲೆ ಮಾವನವರಿಗೆ ನಮಸ್ಕಾರ, ನನಗೆ ಆಶೀರ್ವಾದ, ಮಾಡಿ ಕಡೆಗೆ ನಮ್ಮತ್ತೆಗೆ ಮಹಾತಾಯಿ ನಮಸ್ಕಾರ ಎಂದು ಹೇಳಿ ಬೇರೆ ಮಾತನಾಡದೆ ಧಡಧಡನೆ ಬಂದಹಾಗೆಯೇ ಅವಸರವಾಗಿ ಹೊರಟುಹೋದರು.

ಅವರು ನಾಲ್ಕು ವರ್ಷದ ಮೇಲೆ ಮತ್ತೆ ಬೆಂಗಳೂರಿಗೆ ಬಂದರು. ನಮ್ಮ ಮಗುವನ್ನು ನೋಡಿ ಸಂತೋಷಪಟ್ಟರು. "ನಿಮ್ಮನ್ನೆಲ್ಲಾ ಬಿಟ್ಟು ಹೋಗೋಕೆ ಮನಸ್ಸು ಬರುತ್ತೋ ಇಲ್ಲವೋ ಎನ್ನುವ ಭಯದಿಂದ ಆ ದಿನ ಹಾಗೆ ಓಡಿಹೋದೆ ನೋಡಿ; ಪ್ರಾಣ ಗಾಡಿ ಹತ್ತಿರ ನಿಂತುಬಿಟ್ಟಿತು; ಊರಿಗೆ ಹಿಂದಕ್ಕೆ ಹೋದದ್ದು ಒರೇ ಒಂದು ಹೆಣ, ನೋಡಿ" ಎಂದರು. ನಾವೆಲ್ಲ ಅವರನ್ನು ಆದಷ್ಟು ಆದರದಿಂದ ಕಂಡೆವು. ಅವರು ಆ ದಿನ ಇದ್ದು ಮಾರನೆಯ ದಿನ ಹೊರಟುಹೋದರು. ಹಿಂದಕ್ಕೆ ಹೋಗಬೇಕಾದರೆ ತೊರೆಯಪುರದಲ್ಲಿ ಪಟ್ಟ ಹಿಂಸೆಯ ಚಿಹ್ನೆ ಯಾವುದನ್ನೂ ತೋರಿಸಲಿಲ್ಲ. ಆಗ್ಗೆ ಈಗ್ಗೆ ಅವರ ಮನಸ್ಸು ಇನ್ನೂ ಪರಿಪಕ್ವವಾಗಿತ್ತು. ನೋಡಬೇಕೆಂದು

ತೋರಿತು, ಬಂದರು. ಅದು ತಪ್ಪು ಎಂದು ಯೋಚಿಸಲಿಲ್ಲ. ನೋಡಿ ಯಾಯಿತು, ಹೊರಟರು. ಹೊರಡುವುದಕ್ಕೆ ಖೇದವಿಲ್ಲ. ನಾವೆಲ್ಲ ಇವರನ್ನು "ಇಲ್ಲೇ ಇದ್ದುಬಿಡಿ. ಕೊಂಚ ದಿನ ಇರಿ. ನಾಳೆ ಮಾತ್ರ ಇರಿ" ಎಂದು ಬೇಡಿದೆವು. ಕೇಳಲಿಲ್ಲ; ಹೊರಟುಹೋದರು.

ಊರಿಗೆ ಹೋಗುವ ದಿನ ಬೆಳಿಗ್ಗೆ ಸುಬ್ಬಣ್ಣನವರು ಇದ್ದಕ್ಕಿದ್ದಹಾಗೆ "ಏನು ಸ್ವಾಮಿ ಅವನೂ ಮರೆತುಬಿಟ್ಟಾಂತ ಕಾಣುತ್ತೆ ನನ್ನ" ಎಂದರು. ನಾನು "ಯಾರು?" ಎಂದೆ. ಸುಬ್ಬಣ್ಣನವರು "ಯಮಧರ್ಮರಾಯ. ಅವನೂ ಮರೆತುಬಿಟ್ಟಿದ್ದಾನೆ" ಎಂದರು. ನನಗೆ ಏನು ಹೇಳುವುದಕ್ಕೂ ತೋರಲಿಲ್ಲ. ನಮ್ಮ ಮಾವ "ಏನೂ ಭಯಪಡಬೇಡಿ ಸುಬ್ಬಣ್ಣನವರೆ, ಅವನು ಮರೆಯುಗಿರಿಯೋದಿಲ್ಲ ಹೆದರಬೇಡಿ" ಎಂದರು. ಸುಬ್ಬಣ್ಣನವರಿಗೆ ಬಾಳು ಸಾಕಾಗಿತ್ತು. ಅದು ಬೇಸರವಲ್ಲ; ಸಾಕಾಯಿತೆಂಬ ಭಾವನೆ ಮಾತ್ರ. ಬಿಡುಗಡೆಯೂ ಬೇಗನೆ ಬಂದಿತು. ಅವರು ಊರಿಗೆ ಹೋದ ಒಂದು ವಾರ ದಲ್ಲಿ ನಮಗೆ ವೆಂಕಟರಮಣ ಒಂದು ಕಾಗದ ಬರೆದ. ಮೂರು ದಿನಗಳ ಹಿಂದೆ ಸುಬ್ಬಣ್ಣನವರು ದೇವಸ್ಥಾನದಿಂದ ಐವತ್ತು ಗಜ ದೂರದಲ್ಲಿ ಒಂದು ಮರದ ಕೆಳಗೆ ಕುಳಿತು ಕೈಜೋಡಿಸಿಕೊಂಡಿದ್ದ ಹಾಗೆಯೇ ಪ್ರಾಣ ಬಿಟ್ಟಿದ್ದ ರೆಂದು ಅದರಲ್ಲಿತ್ತು. ಊರಿನ ಬ್ರಾಹ್ಮಣರು ಉತ್ತರ ಕ್ರಿಯೆಗಳನ್ನು ನಡೆ ಯಿಸಿದರಂತೆ. "ಬ್ಯಾಂಕಿನಲ್ಲಿದ್ದ ಹಣದಲ್ಲಿ ಇನ್ನೂ ಇನ್ನೂರು ರೂಪಾಯಿಯ ಮೇಲೆ ಉಳಿದಿದೆ. ಆದರಿಂದ ವರ್ಷವರ್ಷವೂ ದೇವಸ್ಥಾನದಲ್ಲಿ ಒಂದು ದಿನ ಸಂತರ್ಪಣೆ ನಡೆಯುವ ಹಾಗೆ ಏರ್ಪಾಡು ಮಾಡುತ್ತೇನೆ. ಅವರು ಹಾಗೆ ಇಷ್ಟಪಟ್ಟಿದ್ದರು" ಎಂದೂ ಅವನು ಬರೆದಿದ್ದನು. ನಾವೆಲ್ಲ ಆ ದಿನ ನೆಂಟರಿಗೆ ಹೇಗೋ ಹಾಗೆ ನಡೆದುಕೊಂಡೆವು.

ಹೀಗೆ ಸುಬ್ಬಣ್ಣನವರು ಈ ಜೀವನದ ನಾಟಕವನ್ನು ಮುಗಿಸಿ ಮುಕ್ತಿ ಯನ್ನು ಹೊಂದಿದರು.

## ೧೨

ಮುಕ್ತಿಯೆನ್ನುವುದು ಇದ್ದರೆ ಸುಬ್ಬಣ್ಣನವರು ಅದನ್ನು ಪಡೆದಿದಾರೆ ಎನ್ನುವುದರಲ್ಲಿ ನನ್ನ ಮನಸ್ಸಿಗೆ ಯಾವ ಸಂದೇಹವೂ ಇಲ್ಲ.

ನಾನು ಅವರನ್ನು ಒಂದು ಸಲ ಸಂಗೀತದಲ್ಲಿ ಒಂದೊಂದು ಮಟ್ಟಕ್ಕೆ ಏಳೇಳು ಸ್ವರಾನೇ ಏತಕ್ಕೆ ಸುಬ್ಬಣ್ಣನವರೇ ಎಂದೆ. ಅವರು "ನಾವು ಏಳು ಎಂತ ಇಟ್ಟುಕೊಂಡರೆ ಏಳು; ನೋಡಲಿಕ್ಕೆ ಹೋದರೆ, ಇಲ್ಲ ನೂರು ಕೋಟಿ ಸ್ವರ, ಇಲ್ಲ ಒಂದು ಸ್ವರ" ಎಂದರು. ಅವರು ಪಿಟೀಲು ಬಾರಿಸುವುದನ್ನು ಕೇಳಿದಾಗ ಇದರ ಅರ್ಥ ಏನೋ ಒಂದು ವಿಧವಾಗಿ ಸ್ವಲ್ಪ ಮಟ್ಟಿಗೆ ತಿಳಿಯುತ್ತಿತ್ತು. ಇನ್ನೊಂದು ಸಲ ನಾನು ಸುಬ್ಬಣ್ಣನವರೇ, ಅದ್ವೈತ ಒಳ್ಳೇದೋ ದ್ವೈತ ಒಳ್ಳೇದೋ ಎಂತ ಕೇಳಿದೆ. ಅವರು "ನನ್ನ ಪಾಡು ನೋಡಿದರೆ ಅದ್ವೈತ ಒಳ್ಳೇದು ಎನ್ನುವಹಾಗೆ ಇದೆ. ಅವರ ಪಾಡು ನೋಡಿದರೆ ದ್ವೈತ ಒಳ್ಳೇದು ಎನ್ನುವ ಹಾಗೆ ಇದೆ" ಎಂದರು. ನಾನು ಸುಮ್ಮನಿದ್ದೆ. ಅವರು ಮಾತಾಡುವ ರೀತಿಯೇ ಹೀಗೆ. ಒಂದು ಕ್ಷಣದಲ್ಲಿ "ಅವರು" ಯಾರು ಎನ್ನುವುದೂ ಅವರ ಪಾಡು ಎನ್ನುವುದು ಯಾವುದು ಈ ಅಭಿಪ್ರಾಯದ ಕಾರಣವೇನು ಎನ್ನುವುದೂ ಹೊರಕ್ಕೆ ಬರುವುವೆಂದು ನಾನು ಬಲ್ಲೆ. ಸ್ವಲ್ಪ ಹೊತ್ತಿನ ಮೇಲೆ ಅವರು ಹೇಳಿದರು—"ಹೋಗಬೇಕಾದರೆ ನೋಡಿ ಆಕೆ ಹೇಳಿದರು, 'ಇಷ್ಟು ದಿನ ನಿಮ್ಮ ನೆರಳಲ್ಲಿದ್ದುಕೊಂಡು ದಿನಾ ಗೌರೀಪೂಜೆ ಮಾಡಿದೆ. ಈಗ ಅವಳೇ ಹತ್ತಿರಕ್ಕೆ ಕರೆದುಕೊಳ್ಳುತ್ತಾ ಇದ್ದಾಳೆ; ನಿಮ್ಮನ್ನೊಂಟಿಯಾಗಿ ಬಿಡುವುದೊಂದೇ ದುಃಖ; ಹೊಟ್ಟೇಲಿ ಹುಟ್ಟಿದ ಮಕ್ಕಳೂ ಇಲ್ಲವಾದವು; ಆದರೇನು? ಕರ್ಮ ಸವೆದಾಗ್ಗೆ ನೀವೂ ಅಲ್ಲಿಗೆ ಬರುತ್ತೀರಲ್ಲ, ಅಲ್ಲೇ ಇರುತ್ತೇನೆ. ಇಬ್ಬರೂ ಜೊತೆಯಾಗಿ ದೇವೀ ಸೇವೇಲಿ ನಿಂತುಬಿಡೋಣ' ಎಂದರು. ಅವರ ನಂಬಿಕೆ ಅವರ ಜೀವನ ನೋಡಿದರೆ ದ್ವೈತವಾಗೇ ಇರಲಿ ಎನ್ನಿಸುತ್ತೆ. ನನ್ನ ಬದುಕು ನೋಡಿದರೆ ಈ ಆಟ ಎಷ್ಟು ಬೇಗನೆ ಮುಗಿದರೆ ಅಷ್ಟು ಒಳ್ಳೆಯದು, ಇದಾದಮೇಲೆ ಅದ್ವೈತವಾಗಿದ್ದುಬಿಡೋದು, ಎನ್ನಿಸುತ್ತದೆ."

ಇನ್ನೊಂದು ಸಲ ನಾನು "ಸುಬ್ಬಣ್ಣನವರೇ ಶಿವ ಹೆಚ್ಚೋ, ವಿಷ್ಣು ಹೆಚ್ಚೋ?" ಎಂದೆ. ಸುಬ್ಬಣ್ಣನವರು ಏನನ್ನೂ ಹೇಳಲಿಲ್ಲ. ನಾನು ಆ ಮಾತನ್ನು ಅವರು ಕಿವಿಯಲ್ಲಿ ಹಾಕಿಕೊಳ್ಳಲಿಲ್ಲವೆಂದಿದ್ದೆ. ಕಾಲು ಗಂಟೆ ಬಿಟ್ಟು ಪಿಟೀಲನ್ನು ಎತ್ತಿ ಶಂಕರಾಭರಣವನ್ನು ಒಂದು ಗಂಟೆ ಹೊತ್ತು ಆನಂದವಾಗಿ ಬಾರಿಸಿದರು. ಹಿಂದಿನ ದಿನ ಭೈರವಿಯನ್ನು ಹೀಗೆಯೇ

7

